ಓಮ್.

ಶ್ರೀಗುರುದಾರುಕಾಚಾರ್ಯ ಪ್ರಸೀದ

# ಶಿವಾನುಭವ ಶಾಸ್ತ್ರವು.

---

ಶ್ರೀಮದುಜ್ಜಯಿನೀ ಸದ್ಧರ್ಮ ಸಿಂಹಾಸನಾಧೀಶ್ವರ ವೀರಶೈವ
ಜಗದ್ಗುರು ಚರ ಪಟ್ಟಾಧ್ಯಕ್ಷ ಶಿವಾನುಭವ ಶ್ರೀಮನ್ಮ
ರುಳ ಸಿದ್ಧರಾಜದೇಶಿಕೇಂದ್ರ ಮಹಾಸ್ವಾಮಿ
ಳಿಂದ ಪರಿಷ್ಕರಿಸಲ್ಪಟ್ಟು

---

ಆನಂದ ಮುದ್ರಾಶಾಲೆಯಲ್ಲಿ
ಮುದ್ರಿಸಲ್ಪಟ್ಟುದು.
1915

---

# ಶುದ್ಧಾಶುದ್ಧ ಪತ್ರಿಕೆ.

| ಪುಟ | ಪಜ್ತಿ. | ಅಶುದ್ಧ. | ಶುದ್ಧ. |
|---|---|---|---|
| ಉದ್ಧರಣೆ | ೨೬. | ಪ್ರಸಾದಲಿಂಗಿ | ಪ್ರಾಣಲಿಂಗಿ |
| | | ವಲಿಂಗ | ಶಿವಲಿಂಗ |
| ೧೬ | ೧೫ | ಯಕಾನ | ಯಕಾರ |
| ೨೩ | ೧ | ವಿತ್ತ | ಪಿತ್ತ |
| ೨೫ | ೧ | ಸ್ಯೋಜಾತಾಯದೆ | ಸದ್ಯೋಜಾತಾಯವೈ |
| ೩೨ | ೨೩ | ಹೊರವಳಳೆಯಪೊಳು | ಹೊರವಳಯದೊಳು |
| | | ಸುತ್ತಿ ಒರುವ್ರ ಲಕ್ಕಣೆ | ಸುತ್ತಿಬರಿಯುವ ಲೆಕ್ಕಣಿ |
| | | ಯಲ್ಲಿ | ಕೆಯಲ್ಲಿ |
| ೩೮ | ೭ | ್ರದ್ರಾಕ್ಷಾ | ರುದ್ರಾಕ್ಷಾ |
| ೩೯ | ೧೭ | ಶಿವಪದಾಖ್ಯ | ಶಿವಸದಾಖ್ಯ |
| ೪೪ | ೧೭ | ಸ್ವಾರಾಕ್ಷರ | ಸ್ವರಾಕ್ಷರ |
| ೪೪ | ೨೯ | ತಮದಾಕಾರ | ತಮಂಧಾಕಾರ |
| ೫೨ | ೧೦ | ಆಘೊಶ | ಅಘೋೀಶ |
| ೫೪ | ೨೪ | ವಾಗ್ಜೆಜಯೆ | ವಾಗ್ಜೆಯ |
| ೫೫ | ೯ | ದರ್ರ | ರುದ್ರ |
| ೫೭ | ೧೮ | ಪಆರಾರ್ಥ | ಆಪರಾರ್ಥ |
| ೫೮ | ೧೧ | ಸಪುಂಸಕ | ನಪುಂಸಕ |
| ೬೨ | ೯ | ವಾಹನರೂಪವಾಗಿ | ವಹ ನರರೂಪವಾಗಿ |
| ೬೩ | ೧೩ | ಸಿಗ್ರಹ | ವಿಗ್ರಹ |
| ೬೨ | ೨೧ | ಕೇಡುಗಳು | ಕೋಡುಗಳು |
| ೯೫ | ೧೭ | ಚಿತ್ಕಾರಣ | ಚಿತ್ಕರಣ |
| ೯೩ | ೨೦ | ಕೊಳ್ಗಳು | ಕೋಡ್ಗಳು |
| ೯೯ ೯೪ | ೨೦ | ನಾದಾನುಷಂಗಿ | ನಾದಾನುಸಂಗಿ |

ಓಮ್.



ಶ್ರೀಗುರುಭ್ಯೋನಮಃ.

ಚಿದೈಶ್ವರ್ಯ ಚಿದಾಭರಣ ವೆಂಬ

# ಶಿವಾನುಭವ ಶಾಸ್ತ್ರವು.

---

## ಅ ನಾ ದಿ ಭ ಕ್ತೋ ದ್ಧ ರ ಣೆ.

ಶ್ರೀ ವೀರಶೈವಸಿದ್ಧಾಂತಸ್ಥಾಪನಾಚಾರ್ಯರಪ್ಪಾಧ್ಯರ ಅನುಮತದಿಂ ದುದ್ಧರಿಸಿದ, ಕುಟಿಲಕುಹಕಮಂತ್ರಂಗಳಲ್ಲದ, ಶಿವಜ್ಞಾನಸಾಧನವಪ್ಪ, ಶಿವ ಮಂತ್ರನ್ಯಾಸ ಶಿವತತ್ವಸ್ಥಾಪಿತ ಶಿವ ಲಿಂಗಾಂಗಸಂಬಂಧತ್ವ ಪ್ರತಿಪಾದ ಕಾಗಮಗ್ರಂಥಾರ್ಥವಾಚ್ಯಂಗಳಿಂ ಕೆಲವು 'ವಚನಂಗಳಿಂ ಸಂಗ್ರಹಿಸಿದ ಉ ಧ್ಧರಣೆಯ ಪಟಲವಿದು ಶಿವಲಿಂಗಾಂಕಿತ ಶಾಸನವೆಂದು ಶಿವಶರಣರವಧರಿ ಪುದು.

ಪ್ರಥಮದಲ್ಲಿ ಅನಾದಿ ಭಕ್ತೋದ್ಧರಣೆಯ ಸಂಬಂಧ:—ಸರ್ವಶೂನ್ಯ ನಿರಾಲಂಬವಸ್ತುವಿನ ಚಿನ್ನಾದಚಿದ್ಬಿಂದುಸ್ವರೂಪವಾದ ಲಿಂಗಜಂಗಮ ವ !ಗರ್ಭೀಕರಿಸಿಕೊಂಡಿರ್ಪ ಚಿತ್ಕಲಾಸ್ವರೂಪವಾದ ಅನಾದಿಭಕ್ತನ ನಿಲ ವೆಂತೆಂದೊಡೆ:—ಸತ್ತು ಚಿತ್ತು ಆನಂದ ನಿತ್ಯಪರಿಪೂರ್ಣ, ಅಖಂಡಬ್ರಹ್ಮ ಸ್ವರೂಪ, ಗುರು ಲಿಂಗ ಜಂಗಮ ಪ್ರಸಾದ ಪಾದೋದಕ ಭಕ್ತಿಗಳೆಂಬ ಷಡ್ವ್ರತಾಚಾರ ವಾಚಾರನಿಷ್ಠೆ ಜ್ಞಾನ ಅನುಭವ ಸಮರಸ ಸಾವಧಾನ ವಳವಟ್ಟು ಸರ್ವಾಂಗದಲ್ಲಿ ಸಾಹಿತ್ಯಮಾಗಿ, ಬಳಿಕ ಅಷ್ಟಾವರಣದಿಂದಲಂ ಕೃತಮಾಗಿರ್ಪಾ ಅನಾದಿಭಕ್ತನ ಅಂಗಸಂಬಂಧವನುದ್ಧರಿಸುವ ಕ್ರಮ:

ವೆಂತೆಂದೊಡೆ:— ಆವುದಾನೊಂದು ಶೈವವಾದ ಪತ್ರಮಧ್ಯದಲ್ಲಿ ಒಂದಂಗುಲಪ್ರಮಾಣದ ಚೌಕಮಂ ಬರೆದು, ಬಳಿಕದರ ನಟ್ಟ ನಡುಮಧ್ಯವೆ ಊರ್ಧ್ವಭಾಗವೆನಿಸುವುದರಲ್ಲಿ ಹಕಾರಪ್ರಣವವನು, ಪರಮತೇಜೋರಾಶಿಯೆನಿಪ ಪರವಸ್ತುಸ್ವರೂಪವೆಂದು ಬರೆದು,ಅದರ ವಾಮಭಾಗದಲ್ಲಿ ಅಕಾರವ,ಪೂರ್ವಭಾಗದಲ್ಲಿ ಉಕಾರವ, ಪಶ್ಚಿಮಭಾಗದಲ್ಲಿ ಮಕಾರವ, ದಕ್ಷಿಣಭಾಗದಲ್ಲಿ ಓಂಕಾರವನಾದೊಡೆ,ಚಿನ್ನಾದ ಚಿದ್ಬಿಂದು ಕಲಾ ತೇಜೋಮಯವಪ್ಪ ಚಿತ್ಪ್ರಾಣ ಚಿದಂಗ ಚಿತ್‌ಶಿಖಿ ಚಿದಾಕಾಶ ಸ್ವರೂಪವೆಂಬ ಭಾವನೆಯಿಂ ಬರೆಯಲದು ಸೂಕ್ಷ್ಮಕರ್ಣಿಕಾವರಣಕಾರಣತನುಸಂಬಂಧವೆನಿಸಿತ್ತು:— ಬಳಿಕ ಚೌಕಮಂ ಬಳಸಿ ಅರ್ಧಾಂಗುಲಪ್ರಮಾಣವ ಹೆಚ್ಚಿಸಿ, ಮತ್ತೊಂದು ಚೌಕಮಂ ಬರೆದು, ಮಧ್ಯದ ಸೀಳರೇಖೆಗಳೆರಡರ ಪೂರ್ವಾಪರದ ತುದಿಗಳುನ್ನತಮಂ ಮಾಡಲು, ಸಮವಿಷಮದ ಮನೆಗಳು ನಾಲ್ಕು ಪುಟ್ಟುವವವರೊಳು, ಪೂರ್ವದಿಕ್ಕಿನಮನೆಯಲ್ಲಿ ಒಸವಾಕ್ಷರವ ಆತ್ಮತ್ರಯ ಲಿಂಗತ್ರಯ ಸ್ವರೂಪವೆಂದು, ಪಶ್ಚಿಮದಿಕ್ಕಿನ ಮನೆಯಲ್ಲಿ ಅ ಉ ಮಾಕ್ಷರವ ತನುತ್ರಯ ಅಂಗತ್ರಯ ಸ್ವರೂಪವೆಂದು ವಿಮುಖವಾಗಿಬರೆವುದು.ದಕ್ಷಿಣದಿಕ್ಕಿನ ಮನೆಯಲ್ಲಿ ಒಂದರಿಂದೊಂದು ಊರ್ಧ್ವಮುಖವಾಗಿ ಷಟ್ಪ್ರಸಾದಪ್ರಣವಂಗಳೆ ಷಟ್ಕರಣ ಷಟ್ಸಾದಾಖ್ಯಲಿಂಗಸ್ವರೂಪವೆಂದೂ,ಉತ್ತರದಿಕ್ಕಿನ ಮನೆಯಲ್ಲಿ ಒಂದರಿಂದೊಂದು ಅಧೋಮುಖವಾಗಿ ಷಡ್ವಿಧಮೂಲಪ್ರಣವಂಗಳೆ ಷಟ್ತತ್ವ ಷಡ್ವಿಧ ಚಿದಂಗ ಸ್ವರೂಪವೆಂದೂ ಬರಯಲದು ಹೃದಯಾಂತಸ್ಥವಾದ ಕರ್ಣಿಕಾವರಣ ಸೂಕ್ಷ್ಮತನುಸಂಬಂಧವೆನಿಸುವುದು. ಬಳಿಕ ಚೌಕದ ಅಷ್ಟದಿಕ್ಕುಗಳಲ್ಲಿ ಮಧ್ಯ ಚೌಕದ ಪ್ರಮಾಣದ ಮನೆಗಳು ನಾಲ್ಕುನಾಲ್ಕಾಗಿ ಮೂವತ್ತೆರಡು ಮನೆಗಳು. ಪೂರ್ವಾಪರದ ಮನೆಗಳೆರಡರ ಮೇಲೆರಡೆರಡು ಮನೆಗಳಂ ಬರೆದು,ಅವರೊಳು ಈಶಾನ್ಯ ಇಂದ್ರಾಗ್ನಿಗಳ ಮೇಲೆರಡೆರಡು ಮನೆಗಳಲ್ಲಿ ಕ್ರಮದಿಂ ನ ಮ ಶಿ ವಾ ಯ ಓಂ ಎಂಬ ನಕಾರಾದಿ ಷಡಕ್ಷರಂಗಳಂ ಬರೆದವರಲ್ಲಿ ಅಖಂಡತ್ವವೇ ಭಕ್ತ,ಪರಿಪೂರ್ಣತ್ವವೆ ಗುರು,ನಿತ್ಯತ್ವವೇ ಲಿಂಗ,ಚಿತ್ಪ್ರಕಾಶವೆ ಜಂಗಮ,ಪರಮಾನಂದವೆ ಪ್ರಸಾದ, ಚಿದ್ರಸವೆ ಪಾದೋದಕ, ಎಂಬೀ ಷಡ್ವಿಧ ಭಕ್ತಲಕ್ಷಣಂಗಳಂಸಂಬಂಧಿಸುವುದು. ಅವರ ಕೆಳಗಣ ಷಡ್ವಿಧ ಭವನಂಗಳಲ್ಲಿ ಮ ಶಿ ವಾ ಯ ಓ ನ ಎಂಬ ಮಕಾರಾದಿಷಡಕ್ಷರಂಗಳಂ ಬರದವರಲ್ಲಿ ಪರಿಪೂ

ರ್ಣತ್ವವೆ ಗುರು,ಸಿತ್ಯತ್ವವೆ ಲಿಂಗ, ಚಿತ್ಪ್ರಕಾಶವೇ ಜಂಗಮ, ಪರಮಾನಂದ ವೇ ಪ್ರಸಾದ, ಚಿದ್ರಸವೇ ಪಾದೋದಕ, ಅಖಂಡತ್ವವೇ ಭಕ್ತನೆಂಬೀ ಗುರು ಲಕ್ಷಣಗಳಂಸಂಬಂಧಿಸುವುದು.ಬಳಿಕ ಇದರಿಂದುಳಿದ ಮನೆಗಳಲ್ಲಿ ಶಿ ಮ ವ ಯ ಓ ನ ಎಂಬ ಶಿಕಾರಾದಿ ಷಡಕ್ಷರಂಗಳಂ ಬರೆದವರಲ್ಲಿ ಸಿತ್ಯತ್ವವೆ ಲಿಂಗ, ಪರಿಪೂರ್ಣತ್ವವೇ ಗುರು,ಚಿತ್ಪ್ರಕಾಶವೆ ಜಂಗಮ,ಪರಮಾನಂದವೆ ಪ್ರಸಾದ, ಚಿದ್ರಸವೆ ಪಾದೋದಕ, ಅಖಂಡತ್ವವೇ ಭಕ್ತನೆಂಬೀ ಷಡ್ವಿಧ ಲಿಂಗ ಲಕ್ಷ ಣಗಳಂ ಸಂಬಂಧಿಸುವುದು.ವ ಮ ಶಿ ಯ ಓ ನ ಎಂಬ ವಕಾರಾದಿಷಡಕ್ಷರಂಗ ಳಂ ಬರೆದವರಲ್ಲಿ ಚಿತ್ಪ್ರಕಾಶವೆ ಜಂಗಮ ಪರಿಪೂರ್ಣತ್ವವೆ ಗುರು, ಸಿತ್ಯ ತ್ವವೇ ಲಿಂಗ, ಪರಮಾನಂದವೆ ಪ್ರಸಾದ,ಚಿದ್ರಸವೇ ಪಾದೋದಕ,ಅಖಂಡ ತ್ವವೇ ಭಕ್ತನೆಂಬೀಷಡ್ವಿಧ ಚರಲಕ್ಷಣಂಗಳಂ ಸಂಬಂಧಿಸುವುದು. ಯ ಮ ಶಿ ವ ಓ ನ ಎಂಬ ಯಕಾರ ಷಡಕ್ಷರಗಳಂ ಬರೆದವರಲ್ಲಿ ಪರಮಾನಂದವೇ ಪ್ರಸಾ ದ, ಪರಿಪೂರ್ಣತ್ವವೇ ಗುರು, ಸಿತ್ಯತ್ವವೇ ಲಿಂಗ, ಚಿತ್ಪ್ರಕಾಶವೇ ಜಂಗಮ, ಚಿದ್ರಸವೇ ಪಾದೋದಕ, ಅಖಂಡತ್ವವೇ ಭಕ್ತನೆಂಬೀ ಷಡ್ವಿಧಶೇಷಲಕ್ಷಣಂ ಗಳಂ ಸಂಬಂಧಿಸುವುದು.ಓಂ ಮ ಶಿ ವ ಯ ನ ಎಂಬ ಓಂಕಾರ ಷಡಕ್ಷರಂಗ ಳಂ ಬರೆದವರಲ್ಲಿ ಚಿದ್ರಸವೇ ಪಾದೋದಕ,ಪರಿಪೂರ್ಣತ್ವವೇ ಗುರು, ಸಿತ್ಯತ್ವ ವೇ ಲಿಂಗ,ಚಿತ್ಪ್ರಕಾಶವೇ ಜಂಗಮ, ಪರಮಾನಂದವೇ ಪ್ರಸಾದ,ಅಖಂಡತ್ವ ವೆ ಭಕ್ತನೆಂಬೀ ಷಡ್ವಿಧತೀರ್ಥಲಕ್ಷಣಂಗಳಂ ಸಂಬಂಧಿಸುವುದು.ಬಳಿಕೀಪ್ರಕಾ ರದಿಂ ಮೂವತ್ತಾರಂಗ, ಮೂವತ್ತಾರುಲಿಂಗ, ಮೂವತ್ತಾರು ಭಕ್ತಿಗಳಂ ಸಂಬಂಧಿಸಲು, ಷಟ್ಪ್ರಂಶನ್ಮಂತ್ರಾಚಾರ ಲಿಂಗಾಂಗ ಸಂಬಂಧ ಸ್ವರೂಪ ದಿಂ ಸ್ಥೂಲತನು ಸಂಬಂಧವೆನಿಸುವುದು. ಇನ್ನು ದಕ್ಷಿಣೋತ್ತರದ ಮನೆಗಳೆ ರಡರ ಮೇಲೆರಡೆಡುಮನೆಗಳು ಪುಷ್ಪಲು ದ್ವಾದಶಾಕೃತಿಯಾಗಿಪೂರ್ವವರ ಮೂಲೆಮೂಲೆಗಳ ತುದಿಯಲ್ಲಿ ದ್ವಾದಶದಳಂಗಳಂ ಬರೆದು,ಈಶಾನ್ಯದಳದಲ್ಲಿ ನಕಾರವ ಅಲ್ಲಿ ಗುರುವ, ಅಗ್ನಿದಳದಲ್ಲಿ ಮಕಾರವ ಅಲ್ಲಿ ಲಿಂಗವ, ದಕ್ಷಿಣದ ಮನೆಗಳೆರಡರಲ್ಲಿ ಶಿಕಾರವಕಾರಗಳನಲ್ಲಿ ಜಂಗಮವ ಪ್ರಸಾದವ, ನೈರುತ್ಯದ ಳದಲ್ಲಿ ಯಕಾರವ ಅಲ್ಲಿ ಪಾದೋದಕವ, ವಾಯವ್ಯದಳದಲ್ಲಿ ಅಕಾರವ ಅಲ್ಲಿ ವಿಭೂತಿಯ, ಉತ್ತರದ ಮನೆಗಳೆರಡರಲ್ಲಿ ಉಕಾರ ಮಕಾರಗಳ ಬರೆದವರಲ್ಲಿ ರುದ್ರಾಕ್ಷಪಂಚಾಕ್ಷರಿಯ ಸಂಬಂಧಿಸಲು, ಇವು ಅಷ್ಟಾವರಣವೆನಿಸಿಪ್ಪುವು

ಇನ್ನು ಈಶಾನ್ಯದಳದ ಮುಂದಣ ದಳವಾದಿಯಾಗಿ ಉಳಿದ ಶೂನ್ಯದಳಂಗಳೆಂಟರಲ್ಲಿ ಪರಿಪಿಡಿಯಿಂಡೆಂಟು ತೆರನಾದ ಲಿಂಗಾಂಗ ಮಂತ್ರಾಂಗ ಶಿವಾಂಗ ಶಕ್ತ್ಯಂಗ ಬ್ರಹ್ಮಾಂಗ ಜ್ಞಾನಾಂಗ ಪದಾರ್ಥಾಂಗ ಪ್ರಸಾದಾಂಗಂಗಳಂ ಸಂಬಂಧಿಸಲು, ಇಂತು ಸರ್ವಾಚಾರಸಂಪತ್ತು ಜ್ಞಾನ ಕ್ರಿಯಾಭೇದದಿಂ ಇಷ್ಟ ಪ್ರಾಣಸಂಯುಕ್ತವಹ ದೃಗ್ದೃಶ್ಯಾಂಗಸಂಬಂಧವಾಗಿಹವು. ಮತ್ತಂ ಪಶ್ಚಿಮದಳದಲ್ಲಿ ನಿರಂಜನಲಿಂಗ, ಶಿಖಿಯಲ್ಲಿ ಶೂನ್ಯಲಿಂಗ, ಬ್ರಹ್ಮರಂಧ್ರದಲ್ಲಿ ಚಿದಂಬರ, ಭ್ರೂಮಧ್ಯದಲ್ಲಿ ಶಿವಶಕ್ತಿ, ವಿಶುದ್ಧಿಯಲ್ಲಿ ಪಂಚಶಕ್ತಿ, ಪಂಚಕಲೆ, ಪಂಚಮುಖ, ಪಂಚಸದಾಖ್ಯ,ಪಂಚನಾದ, ಪಂಚಮೂರ್ತಿ, ಅನಾಹತದಲ್ಲಿ ಈಶ್ವರಾಷ್ಟಕ, ಮಣಿಪೂರಕದಲ್ಲಿ ಮಹೇಶ್ವರ ಪಂಚವಿಂಶತಿ, ಸ್ವಾಧಿಷ್ಠಾನದಲ್ಲಿ ರುದ್ರರೇಕಾದಶ, ಆಧಾರದಲ್ಲಿ ತ್ರಯಾವಯವ, ಹಿರಣ್ಯಗರ್ಭ ವಿರಣ್ಮೂರ್ತಿ' ಸ್ವಾಯತವಾಗಿಹವು. ಮತ್ತಂ.

## ಸೃ ಷ್ಟಿ ಕ್ರ ಮ.

ನಾಭ್ಯಂತರದಲ್ಲಿ ಚಿದಾಕಾಶ, ವಲ್ಲಿ ಚಿದ್ವಾಯು,ವದರೊಳು ಚಿದಗ್ನಿ, ಯದರಿಂ ಚಿಜ್ಜಲ, ವಲ್ಲಿ ಚಿದ್ಭೂಮಿ,ಯುದಯಿಸಿ ಸಕಲತತ್ವಜನನ ಸ್ಥಿತಿಕಾರಣವಾಗಿರ್ಪವು. ಇಂತು ಅನಾದಿಭಕ್ತೋದ್ಧರಣೆಯಸಂಬಂಧ ಸಮಾಪ್ತ ಮಂಗಳಮಹಾ.

---

ಗುರುಭ್ಯೋನಮಃ.

## ಅ ಷ್ಟಾ ವ ರ ಣೋ ದ್ಧ ರ ಣೆ.

ಹೀಗೆ ಸಗುಣ ನಿರ್ಗುಣ ಸ್ವಭಾವ ಚಾರಿತ್ರವನುಳ್ಳ ಅನಾದಿಭಕ್ತನ ಅಂಗದಲ್ಲಿ ಅಲಂಕೃತಮಾಗಿ ತೋರುವ ಅಷ್ಟಾವರಣದ ಜ್ಞಾನಸಾಧನ ಸಂಪತ್ತಿನ ಭೇದವೆಂತೆಂದೊಡೆ:—ಚಕ್ರಾಕೃತಿಯಾಗಿ ತಿರುಹಿ, ಅದರ ಮಧ್ಯದಲ್ಲಿ ಕರ್ಣಿಕಾವರಣಮಂ ಬಳಸಿ, ಚತುರ್ವಿಧಸಾಧನ ಭೇದಮಾಗಿರ್ಪ ಅಷ್ಟದಳಂಗಳಂ ಬರೆದವರಲ್ಲಿ ಪೂರ್ವದಳ ಮೊದಲುಗೊಂಡು ತ್ರಿವಿಧತ್ರಿವಿಧ ದರ್ಶನ ಭೇದವನೊಳಕೊಂಡಿರ್ಪ ಅಷ್ಟಾವರಣಮನುದ್ಧರಿಸಿ, ಏಕೈಕಾವರಣತಂ

ತ್ರುಪಿಥಾನದಿಂ ಸಂಬಂಧಿಸುವ ಭೇದವೆಂತೆಂದೊಡೆ:—ಶ್ರೀಗುರುವಿನ ಪಾದವೆ ಅವಿರಳಘನಲಿಂಗ, ತನ್ಮೂರ್ತಿಯೇ ಆರ್ಯನು, ತತ್ವಸಂಬಂಧವಾದ ಸುಜ್ಞಾನವೇ ಜರಮೂರ್ತಿ, ಶಿವಲಿಂಗದ ಪೀಠವೇ ಗುರು,ಗೋಮುಖವೇ ಜರಮೂರ್ತಿ, ಗೋಳಕವೇ ಶಿವಲಿಂಗ, ಜಂಗಮದ ಶ್ರೀಪಾದವೇ ಅವಿರಳಘನಲಿಂಗ, ತನ್ಮೂರ್ತಿಯೇ ಜರಮೂರ್ತಿ, ತತ್ಸಬಂಥಸುಜ್ಞಾನವೇ ಶ್ರೀದೇಶಿಕ, ಶೇಷಸಯವೇ ಮಹಾಘನಲಿಂಗ, ತದ್ರುಚಿಯೇ ಜರಮೂರ್ತಿ, ಪರಿಣಾಮವೇ ಶ್ರೀಗುರು,ಪಾದೋದಕದ ಸ್ವರೂಪವೆ ಶ್ರೀಗುರು,ತಜ್ಜಿಧ್ರುಸವೇ ಶಿವಲಿಂಗ,ಶಿವನ ಮುಖವಾನಂದವೇ ಜರಮೂರ್ತಿ, ಭಸ್ಮಸ್ವಯವೆ ಶಿವಲಿಂಗ, ತದ್ಗತ ಮಂತ್ರವೇ ಜರಮೂರ್ತಿ, ದ್ವಂದ್ವಗ್ರಸ್ತಚೈತನ್ಯಮೆ ಶ್ರೀಗುರು, ಅಕ್ಷರಮೂಲವೇ ಶ್ರೀಗುರು, ತನ್ನಾಳವೆ ಶಿವಲಿಂಗ, ತನ್ಮುಖವೇ ಜರಮೂರ್ತಿ, ನ ಮ ವರ್ಣವೇ ಶಿವಲಿಂಗ, ಶಿವಾಕ್ಷರವೇ ಜರಮೂರ್ತಿ ಆ ಯಕಾರವೇ ಶ್ರೀಗುರು.

ಇನ್ನು ತತ್ಪೂರ್ವ ಸಂಬಂಧವೆ ನಮೋಕ್ಷರದಲ್ಲಿ ಸಂಬಂಧಿಸಲ್ಪಟ್ಟುದದೆಂತೆಂದೊಡೆ:—ಗುಕಾರವೆ ಜರ, ರುಕಾರವೇ, ಲಿಂಗ, ದ್ವಂದ್ವೀಕರಿಸಿದ ಜ್ಞಾನವೇ ಗುರು;ಲಿಕಾರವೆ ಗುರು, ಬಿಂದುವೇ ಲಿಂಗ, ಗಕಾರವೇ ಜರ; ಜಂಕಾರವೇ ಗುರು, ಗಕಾರವೇ ಲಿಂಗ. ಮಕಾರವೇ ಜರ; ಪ್ರಕಾರವೇ ಜರ,ಸಾಕಾರವೇ ಲಿಂಗ, ದಕಾರವೇ ಗುರು; ಪಕಾರ ದಕಾರವೇ ಗುರು, ಉಕಾರ ದಕಾರ ಕಕಾರವೇ ಲಿಂಗ, ಉಭಯಸಂಬಂಧವೇ ಜರ; ವಿಯೆಂಬಕ್ಷರವೆ ಲಿಂಗ, ಭೂಯೆಂಬಕ್ಷರವೇ ಜರ, ತಿಯೆಂಬಕ್ಷರವೇ ಗುರು; ರುಕಾರವೇ ಜಂಗಮ, ದ್ರುಕಾರವೇ ಗುರು, ಕ್ಷಿಕಾರವೇ ಲಿಂಗ, ಮಕಾರವೇ ಲಿಂಗ, ಬಿಂದುವೇ ಜರ, ತ್ರುಕಾರವೇ ಗುರು.

ಮತ್ತಂ ಶಕ್ತಿರೂಪು ಶಿವರೂಪಾದಕಾರಣ ಗುರುಶಬ್ದಕ್ಕೆ ನಿರ್ವಜನ; ಲಯಸ್ಥಿತಿ ಸೃಷ್ಟಿಕಾರಣವಾದುದಾಗಿ ಲಿಂಗಶಬ್ದಕ್ಕೆ ನಿರ್ವಜನ; ತ್ರೈಮೂರ್ತಿ ಸ್ವರೂಪಾದಕಾರಣ ಜರಶಬ್ದಕ್ಕೆ ನಿರ್ವಜನ; ಪ್ರಸಾದ ಭಕ್ತಿ ಮುಕ್ತಿ ಸ್ವರೂಪಾದಕಾರಣ, ಶೇಷಶಬ್ದಕ್ಕೆ ನಿರ್ವಜನ; ಸುಜ್ಞಾನ ದೋಷನಾಶನ ಜನ್ಮದಹನ ಕರ್ಮಚ್ಛೇದನದಿಂದುದಕಶಬ್ದಕ್ಕೆ ನಿರ್ವಜನ; ಶಕ್ತಿರೂಪು ತೇಜೋರೂಪು ಶಿವರೂಪಿನಿಂ ಭೂತಿಶಬ್ದಕ್ಕೆ ನಿರ್ವಜನ; ಬಿಂದುಕಳಾನಾದ ಶಿವ ಯೆಂಬೀ ಚತುರ್ವಿಥ ಧಾತುಶಬ್ದದಿಂ ರುದ್ರಾಕ್ಷಿಶಬ್ದಕ್ಕೆ ನಿರ್ವಜ

ನ. ಚಿತ್ಕಳಾ ಮೂಲಪ್ರಕಾಶಸುನಾದ ಸುಜ್ಞಾನದಿಂ ಮಂತ್ರಶಬ್ದಕ್ಕೆ ನಿರ್ವಚನ; ಗುರುವೆ ಇಷ್ಟ, ಲಿಂಗವೇಪ್ರಾಣ, ಜಂಗಮವೇ ಭಾವ, ಪ್ರಸಾದವೇಚಿತ್ಕಾಯ, ಪಾದೋದಕವೇ ಶರಣ, ವಿಭೂತಿಯೇ ಅಂತರಂಗದ ಚಿತ್ಪ್ರಕಾಶ, ರುದ್ರಾಕ್ಷಿಯೇ ಚತುರ್ದಶೇಂದ್ರಿಯಂಗಳು, ಮಂತ್ರವೇ ಷಟ್ಪ್ರಕಾರವಾದ ಮಂತ್ರತತ್ವಕರಣಂಗಳು,

## ಮುಂದೆ ಲಿಂಗಾರ್ಚನ ಕ್ರಮ.

ಇಷ್ಟಲಿಂಗವೇ ಕ್ಷಕಾರ ಸ್ವರೂಪ, ಪ್ರಾಣಲಿಂಗವೇ ಓಂಕಾರಸ್ವರೂಪ, ಭಾವಲಿಂಗವೇ ಹ್ರಾಂಕಾರಸ್ವರೂಪ; ಮತ್ತಂ ಇಷ್ಟಲಿಂಗದ ಪೀಠವೇ ಇಷ್ಟಲಿಂಗ, ಗೋಮುಖವೇ ಪ್ರಾಣಲಿಂಗ. ಗೋಳಕವೇ ಭಾವಲಿಂಗ; ತಾರೆದಂಡೆಗಳೆರಡು ಇಷ್ಟಲಿಂಗ, ಕುಂಡಲಾಕೃತಿ ಅರ್ಧಚಂದ್ರಾಕೃತಿಗಳೆರಡು ಪ್ರಾಣಲಿಂಗ, ದರ್ಪಣಾಕೃತಿ ಜ್ಯೋತಿರಾಕೃತಿಗಳೆರಡು ಭಾವಲಿಂಗ;ಆಕಾರ ಬಿಂದುಗಳೆರಡು ಇಷ್ಟಲಿಂಗ, ಮಂತ್ರಶೃಂಗಾಗ್ನಿ ಬೀಜಂಗಳೆರಡು ಪ್ರಾಣಲಿಂಗ, ದೀರ್ಘವೊಂದೆ ಭಾವಲಿಂಗ;ಇಂತೀತ್ರಿವಿಧ ಪ್ರಕಾರದಲ್ಲಿ ಕರ ಮನ ಭಾವಸ್ಥಲದಲ್ಲಿ ಸಂಬಂಧಿಸಿ ತ್ರಿವಿಧವೊಂದೆಯೆಂದರಿದು ಮಾಡುವ ಪೂಜಾವಿಧಾನವೆಂತೆಂದೊಡೆ:—ಭೂತಿ ರುದ್ರಾಕ್ಷಿಧಾರಣಾಲಂಕಾರವೇ ಇಷ್ಟಲಿಂಗದ ಪೂಜೆ, ಪೂಜಾವಿಧಾನವೇ ಇಷ್ಟಲಿಂಗದಲ್ಲಿ ನ್ಯಸ್ತವಾದ ಪ್ರಾಣಲಿಂಗದ ಪೂಜೆ, ಶ್ರದ್ಧಾಭಕ್ತಿಯೆ ಇಷ್ಟಲಿಂಗದಲ್ಲಿ ನ್ಯಸ್ತವಾದ ಭಾವಲಿಂಗದ ಪೂಜೆ; ಬಹುಪೂಜಾಕ್ರಮುವನಂತರಂಗದಲ್ಲಿ ಅಳವಡಿಸಿಮಾಡುವುದೆ ಪ್ರಾಣಲಿಂಗದ ಪೂಜೆ,ಮಾನಸಮಂತ್ರೋಚ್ಚರಣವೆ ಪ್ರಾಣಲಿಂಗದಲ್ಲಿ ನೆಲಸಿದ ಇಷ್ಟಲಿಂಗದ ಪೂಜೆ, ಧ್ಯಾನಾರೂಢವೆ ಪ್ರಾಣಲಿಂಗದ ಸಂಬಂಧವಾದ ಭಾವಲಿಂಗದ ಪೂಜೆ; ಮನೋಲಯವೆ ಭಾವಲಿಂಗದ ಪೂಜೆ, ಸುಜ್ಞಾನವೆ ಭಾವಲಿಂಗದೊಳಗಣ ಇಷ್ಟಲಿಂಗದ ಪೂಜೆ; ಪರಿಣಾಮವೆ ಭಾವಲಿಂಗದಲ್ಲಿ ಕೂಡಿದ ಪ್ರಾಣಲಿಂಗದಪೂಜೆ; ಮತ್ತಂ ಅಷ್ಟಾವರಣವ ಧರಿಸಿದ ಭಕ್ತನು ಭಕ್ತಿ ಭಾವಭರಿತನಾದಕಾರಣ ಭಕ್ತನೆನಿಸಿಕೊಂಡಬಳಿಕ ಭಕ್ತಿಯೆಂಬ ತ್ರ್ಯಕ್ಷರಕ್ಕೆ ನಿರ್ವಚನ:—ಶ್ರದ್ಧೆ ವಿಶ್ವಾಸದಿಂ ಭಕಾರವಾಯಿತು. ನಿರ್ವಂಚಕತ್ವದಿಂ ಕಕಾರವಾಯಿತು, ದೃಢನಿಷ್ಠೆಯಿಂ ತಿ ಯೆಂಬಕ್ಷರ

ವಾಯಿತು. ಇಂತಹ ಸ್ವರೂಪದರಿವನುಳ್ಳಾತನಾದಕಾರಣ ಜ್ಞಾನಿಯೆನಿಸಿ ಕೊಂಡನು.ಆ ಜ್ಞಾನಶಬ್ದಕ್ಕೆ ನಿರ್ವಚನ:—ಶಿವತತ್ವವ ವರ್ಣನವ ಮಾಡುವ ದರಿಂ ಜ್ಞಾನಕಾಯವಾಯಿತು. ಸಂಸಾರ ಪ್ರಪಂಚಲೋಪವ ಮಾಡುವುದ ರಿಂ ನಕಾರವಾಯಿತು. ಇಂತಪ್ಪ ಸ್ವರೂಪವನರಿದಾಚರಿಸುವಾತನೀಗ ಅ ನಾದಿಭಕ್ತನೆನಿಸಿಕೊಂಬನು. ಇಂತಹ ಭಕ್ತನ ಮನವೇ ಲಿಂಗ, ತನ್ಮನದ ಜ್ಞಾನವೇ ಜಂಗಮ, ಆ ಜ್ಞಾನದ ಪರಿಪೂರ್ಣವೇ ಗುರು, ತದ್ಭಕ್ತನೆ ಶೇಷ, ಆ ಜ್ಞಾನದ ಸಾರವೇ ಪಾದೋದಕ, ಆ ಜ್ಞಾನದ ಪ್ರಕಾಶವೇ ವಿಭೂತಿ, ಆ ಮಾಯಾಕರಣಂಗಳ ಮೇಲೆ ಕರೆದ ಜ್ಞಾನಸಾರಾಮೃತವೃಷ್ಟಿಯೇ ರು ದ್ರಾಕ್ಷಿ, ಆ ಭಕ್ತನ ನಾಮವೇ ಮಂತ್ರ; ಇಂತಹ ಭಕ್ತನೆ ಪರಬ್ರಹ್ಮವೆಂದು ಶರಣೆಂದವರೆ ಧನ್ಯರು. ಅನಾದಿಭಕ್ತನ ಜ್ಞಾನಾಷ್ಟಾವರಣೋದ್ಧರಣೆ ಯ ಸಂಬಂಧ ಸಮಾಪ್ತಂ ಮಂಗಳಮಹಾ.

---

ಗುರುಭ್ಯೋನಮಃ

## ಅನಾದಿಜಂಗಮೋದ್ಧರಣೆ.

ಇಂತು ಸರ್ವಾಚಾರಸಂಪತ್ತೀ ಅಂಗವಾಗಿ, ಸಕಲಕಲಾಮೂರ್ತಿಗಳ ಗರ್ಭೀಕರಿಸಿಕೊಂಡು ಅಷ್ಟಾವರಣದಿಂದಲಂಕೃತವಾಗಿ ವಿರಾಜಿಸುವ ಅನಾ ದಿಭಕ್ತನ ಅಂತರಂಗದಲ್ಲಿ,ಶಿವಧರ್ಮವೆಂಬ ಕಂದದೊಡನೆ ಕೂಡಿದ ಸುಜ್ಞಾ ನವೆಂಬನಾಳವನುಳ್ಳಚಂದ್ರನ, ಹೋಲುವ ಕಾಂತಿಯಿಂದೆಸೆವ ನಿತ್ಯೈಶ್ವರ್ಯ ವೆಂಬ ದಳಾಷ್ಟಕಂಗಳಿಂ, ವೈರಾಗ್ಯವೆಂಬ ಕರ್ಣಿಕೆಯಿಂ, ಶ್ರೀರುದ್ರಗಣಂಗ ಳೆಂಬ ಕಿಂಜಲ್ಕಂಗಳಿಂದೊಪ್ಪುವ ಹೃತ್ಕಮಲಮಧ್ಯದಲ್ಲಿ, ಶ್ವೇತ ರಕ್ತ ಕೃಷ್ಣ ವರ್ಣವನುಳ್ಳ ಚಂದ್ರಸೂರ್ಯಾಗ್ನಿಮಂಡಲತ್ರಯದಮೇಲೆ ಅ ಉ ಮಾಕ್ಷರ ತ್ರಯವೇಕವಾದ ಪ್ರಣವಪೀಠಾಗ್ರದಲ್ಲಿ ಧ್ಯಾನಾರ್ಹಸ್ವರೂಪವಾಗಿ ಚಿ ನ್ಮಯ ಚಿದ್ರೂಪ ಚಿದಾನಂದ ಸುಜ್ಞಾನಭರಿತವೆನಿಸಿ ಸಕಲತತ್ವವೂ ಗರ್ಭೀ ಕೃತವಾದ ಅನಾದಿಜಂಗಮದ ಅಂಗಸಂಬಂಧವನುದ್ಧರಿಸುವ ಕ್ರಮವೆಂ ತೆಂದೊಡೆ.

ಪೂರ್ವಾಪರೋತ್ತರ ದಕ್ಷಿಣಕ್ಕೆ ಹತ್ತುಹತ್ತುರೇಖೆಗಳೊಳಗೆ ಅಂಗುಲಪ್ರಮಾಣದ ಒಂಭತ್ತೊಂಭತ್ತು ಮನೆಗಳು.ಮಧ್ಯರೇಖೆಗಳ ನಾಲ್ಕುನಾಲ್ಕನುಳುಹಿ, ಮಿಕ್ಕ ರೇಖೆಗಳನೆಡಬಲಕೊಂಡಂಗುಲ ಕಿರಿದಾಗಿ ಮತಮಧ್ಯಸ್ಥಾನಮಂಬಿಟ್ಟು ಬರೆಯಲು ಐವತ್ತಾರುಮನೆಗಳಾದುವು. ಆವರೊಳು ಪೂರ್ವಾಪರಕ್ಕೆರಡೆರಡು, ಉತ್ತರದಕ್ಷಿಣಕ್ಕೆ ಮೂರುಮೂರುಮನೆಗಳಂ ಬಿಡಲು ಮಧ್ಯದಲ್ಲಿ ನೀಳವಾಗಿ ಮೂರು, ಅಡ್ಡಲಾಗಿ ಐದುಸಾಲಿನ ಮನೆಗಳುಳಿದಿರ್ಪುವು.ಅದರ ಮಧ್ಯದಲ್ಲಿ ಐದು ಅಡ್ಡರೇಖೆಗಳು.ಪೂರ್ವದಿಕ್ಕಿನ ನಾಲ್ಕುರೇಖೆಗಳನೆರಡಂಗುಲಮಂ ಹೆಚ್ಚಿಸಿ ಎರಡಡ್ಡರೇಖೆಗಳಂ, ಆಮೇಲೆ ನಡುವಣೆರಡು ರೇಖೆಗಳ 'ನೊಂದಂಗುಲಮಂಹೆಚ್ಚಿಸಿ ಅಡ್ಡರೇಖೆಯೊಂದನು, ಅದರ ತುದಿಯಲ್ಲಿ ಗೋಳಕಾಕಾರಮಂ, ಎಂಟುದಿಕ್ಕಿನಲ್ಲಿ ಎಂಟುದಳಂಗಳಂ ಬರೆಯಲು ಅಂಗಪ್ರತ್ಯಂಗಸಾಂಗಾಂಗ ಉಪಾಂಗನ್ಯಾಸ ಮುಗಿಯಿತು. ಇನ್ನು ಮಂತ್ರನ್ಯಾಸ ಸ್ಥಳಕುಳಸಂಮಂಥವೆಂತೆಂದೊಡೆ.

ಮೇಲಣ ಗೋಳಕಾಕಾರದ ಮನೆಯು ಪಶ್ಚಿಮದಲ್ಲಿ ನ್ಯಾಸವಾದ ಪಕಾರವೆ ನಿತ್ಯನಿರಾಲಂಬ ನಿರಂಜನ ಬ್ರಹ್ಮ. ಅದರಕೆಳಗಣಮನೆಯು ಶಿಖಿ, ಅಲ್ಲಿ ನ್ಯಾಸವಾದ ಕ್ಷಕಾರವೆ ನಿತ್ಯನಿರಾಳ ನಿಶ್ಶೂನ್ಯಬ್ರಹ್ಮ. ಅದರಕೆಳಗಣ ದ್ವಾದಶಕೋಟಂಗಳೆ ಬ್ರಹ್ಮರಂಧ್ರ. ಅಲ್ಲಿ ಉತ್ತರದಿಂ ದಕ್ಷಿಣಕ್ಕಾಗಿ ಸಾಲ್ಗೊಂಡು ನ್ಯಾಸವಾದ ಚಿನ್ನಾದ ಚಿದ್ಬಿಂದುಕಲಾಸ್ವರೂಪವಾದ ಬಸವಾಕ್ಷರತ್ರಯವು ಸತ್ಯಾದಿಲಕ್ಷಣವನುಳ್ಳ ಹ್ರಂ ಹ್ರಿಂ ಹ್ರುಂ ಹೈ್ರಂ ಹೌ್ರಂ ಹ್ರಃ ಎಂಬ ಷಟ್ಪ್ರಸಾದ ಮಂತ್ರವು. ಶಿವಶಕ್ತ್ಯಾತ್ಮಕವಾದ ಅ,ಉ, ಮಾಕ್ಷರತ್ರಯವೆಂಬಿವು ನಿತ್ಯನಿರವಯವ ನಿಷ್ಕಲಬ್ರಹ್ಮ. ಅದರಕೆಳಗಣಮನೆಯೆ ಭ್ರೂಮಧ್ಯ.ಅಲ್ಲಿನ್ಯಾಸವಾದ ಓಂಕಾರವೆ ನಿತ್ಯಪರಿಪೂರ್ಣ ಪರಂಜ್ಯೋತಿ ಪರಬ್ರಹ್ಮ. ಮತ್ತಂ ಪ್ರತ್ಯಂಗಸಂಬಂಧದಿಂ ವದನವೆನಿಸುವದು. ಆದರಕೆಳಗಣಮನೆಯೂ ಅದರಡ ಬಲದ ಮನೆಗಳೆರಡೂ ಆತ್ಮತ್ರಯ.ಅಲ್ಲಿನ್ಯಾಸವಾದ ಸುನಾದ ಮಹಾನಾದ ಸ್ವರೂಪವಾದ ಅ ಬ ಬ ಎಂಬಕ್ಷರತ್ರಯವೆ ತತ್ವತ್ರಯವು. ಅವರಕೆಳಗಣಮಧ್ಯ ಭವನವೆ ವಿಶುದ್ಧಿ, ಅಲ್ಲಿ ನ್ಯಾಸವಾದ ಯಕಾರವೆ ವಿಜ್ಞಾನಬ್ರಹ್ಮ. ಅದರ ಕೆಳಗಣಮನೆಯೆ ಅನಾಹತ,ಅಲ್ಲಿ ನ್ಯಾಸವಾದ ವಕಾರವೆ ಆನಂದಬ್ರಹ್ಮ.ಆದರಕೆಳಗಣಮನೆಯೆ ಹೃತ್ಕಮಲಕರ್ಣಿಕಾಕುಹರ,ವದರಲ್ಲಿನ್ಯಾ

ಸವಾದ ಹವಾಗ್ನವೆ ಸರ್ವಚೈತನ್ಯಾತ್ಮಕವಾಗಿ ತೊಳಗಿಬೆಳಗುವ ಪರಮಾತ್ಮ ತತ್ವ. ಅದರಕೆಳಗಣಮನೆಯೆ ಮಣಿಪೂರಕ, ಅದರಲ್ಲಿ ನ್ಯಾಸವಾದ ಶಿಕಾರವೆ ಕಲಾಬ್ರಹ್ಮ. ಒಳಿಕಂಗಸಂಬಂಧದಿಂ ಶರೀರಮಧ್ಯವೆನಿಸುವದು, ಅದರ ಕೆಳಗ ಣಮನೆಯೆ ಸ್ವಾಧಿಷ್ಠಾನ. ಅಲ್ಲಿನ್ಯಾಸವಾದ ಮಕಾರವೇ ಪಿಂಡಬ್ರಹ್ಮ. ಅದ ರಕೆಳಗಣಮನೆಯು ಆಧಾರ. ಅಲ್ಲಿ ನ್ಯಾಸವಾದ ನಕಾರವೆ ಮೂರ್ತಿಬ್ರಹ್ಮ. ಅದರಕೆಳಗಣ ಮನೆಯು ಅದರೆಡ ಬಲದಮನೆಗಳೆರಡು ಅಂಗತ್ರಯ. ಅಲ್ಲಿನ್ಯಾ ಸವಾದ ಬಿಂದು ಚಿದ್ಬಿಂದು ಮಹಾಬಿಂದುಸ್ವರೂಪವಾದ ಉ,ಸ,ಕ್ಷ ಎಂಬ ಕ್ಷ ರತ್ರಯವೆ ಶಕ್ತಿತ್ರಯವು; ಇಂತೀ ನವಚಕ್ರಸ್ಥಾನದಲ್ಲಿ ಪೂರ್ವೋಕ್ತಕಲಾ ಮೂರ್ತಿ ಸಂಬಂಧವನರಿವುದು.

ಸ್ಥಳ ಕುಳ ಸಂಬಂಧವನಾದೊಡೆ ಮುಂದಣ ನವಚಕ್ರೋ ದ್ಧರಣೆಯಲ್ಲಿ ನೋಡಿಕೊಂಬುದು. ಇಂತಿವು ಕಾರಣತನುಸಂಬಂಧವೆಂದ ರಿವುದು. ಇನ್ನು ನಾದವೆಂಬ ಪೆಸರನುಳ್ಳ ಬಕಾರನ್ಯಾಸದ ಮನೆಯ ಕೆಳಗಣ ಷಡ್ವಿಧ ಭವನಂಗಳಲ್ಲಿ ನ್ಯಾಸವಾಗಿರ್ಪ ನಕಾರಾದಿ ಷಡ್ವ ರ್ಣಂಗಳೆ ಸರ್ವಜ್ಞತ್ವ ತೃಪ್ತತ್ವ ಅನಾದಿಬೋಧತ್ವ ಸ್ವತಂತ್ರ ತ್ವ ನಿತ್ಯತ್ವ ಉಪಶಕ್ತತ್ವವೆಂಬೀ ಚಿದಂಗ ಷಟ್‌ಸ್ಥಲವು. ಬಕಾರನ್ಯಾಸ ದ ಮನೆಯ ಕೆಳಗಣ ಷಡ್ವಿಧಭವನಂಗಳಲ್ಲಿ ನ್ಯಾಸವಾದ ಹ್ರಾಂಕಾರಾದಿ ಷಡ್ವರ್ಣಗಂಳೇ ಶಿವ ಸದಾಶಿವ ಈಶ ಬ್ರಹ್ಮೇಶ ಈಶ್ವರ ಈಶಾನ್ಯವೆಂಬ ಷಟ್ಸ ದಾಖ್ಯನಾಮಲಿಂಗಗಳು. ಇಂತಿವು ಸೂಕ್ಷ್ಮತನು ಸಂಬಂಧವೆಂದರಿವುದು. ಇನ್ನು ವಿಶುದ್ಧಿ. ಅನಾಹತದ ಮನೆಯ ಸೊಂಕಿರ್ದ ಮನೆಗಳೆರಡ ಪೂರ್ದಿ ದ ಮನೆಗಳೆರಡು ಭುಜದ್ವಯ, ಅಲ್ಲಿ ನ್ಯಾಸವಾದ ವಕಾರ ಯಕಾರಂಗಳು ಕೆಳಗಣ ಮನೆಗಳೆರಡು ಪಾದಸ್ಥಾನ,ವಲ್ಲಿ ನ್ಯಾಸವಾದ ನಕಾರಮಕಾರಂಗಳು ಶರೀರಮಧ್ಯಸ್ಥವಾದ ಶಿಕಾರವು ವದನಸಂಬಂಧವಾದ ಓಂಕಾರವೆಂಬಿವು ಷಡ್ವಿಧಮಹಾತತ್ವಂಗಳೆನಿಸಿ ಸರ್ವಕಾರಣವಾಗಿಹವು. ಇನ್ನು ಉತ್ತರ ಈಶಾ ನ್ಯ ಮಧ್ಯವಿದಿಕ್ಕಿನ ಮನೆಯು ಮೊದಲು,ಅಗ್ನಿಯಮ ಮಧ್ಯವಿದಿಕ್ಕಿನಮನೆಕಡೆ ಯಾಗಿ ಪಜ್ತಿಪಲ್ಲಟವಿಲ್ಲದೆ ಷಟ್ತ್ರಿಂಶಭುವನಂಗಳ ಷಟ್ತ್ರಿಂಶತ್ತತ್ವಂಗಳು. ಅಲ್ಲಿನ್ಯಾಸವಾದ ನಕಾರಾದಿ ಷಟ್ತ್ರಿಂಶ ನ್ಮಿಶ್ರಪ್ರಣವಂಗಳೆ ಷಟ್ತ್ರಿಂಶ ದಂಗಸ್ಥಲಂಗಳು.ಅವಕ್ಕೆವಿವರ:—ಆಚಾರಾಂಗ ಗೌರಾಂಗ ಶಿವಾಂಗ ಚರಾಂ

ಗ ಪ್ರಸಾದಾಂಗ ಮಹದಂಗವೆಂಬ ಭಕ್ತನಂಗವಾರು. ಆಚಾರನಿಷ್ಠೆ ಗುರುನಿಷ್ಠೆ ಲಿಂಗನಿಷ್ಠೆ ಚರನಿಷ್ಠೆ ಪ್ರಸಾದನಿಷ್ಠೆ ಮಹನ್ನಿಷ್ಠೆಯೆಂಬ ಮಹೇಶನಂಗವಾರು; ಆಚಾರಾವಧಾನಿ ಗೌರವಾವಧಾನಿ ಲಿಂಗಾವಧಾನಿ ಚರಾವಧಾನಿ ಪ್ರಸಾದಾವಧಾನಿ ಮಹದವಧಾನಿಯೆಂಬ ಪ್ರಸಾದಿಯಂಗವಾರು; ಸಾಧ್ಯ ವೇಧ್ಯ ಭೇಧ್ಯ ಯೋಗ್ಯ ಸನ್ನಿಹಿತ ಮಹಾನುಭಾವಿಯೆಂಬ ಪ್ರಾಣಲಿಂಗಿಯಂಗವಾರು; ಆಯತ ಸ್ವಾಯತ ಸನ್ನಿಹಿತ ಕಳಾಗ್ರಾಹಕ ಮನೋಮಗ್ನತೆ ಘನಸಮರಸವೆಂಬ ಶರಣನಂಗವಾರು; ಆಚಾರತೃಪ್ತಿ ಗೌರವತೃಪ್ತಿ ಲಿಂಗತೃಪ್ತಿ ಚರತೃಪ್ತಿ ಪ್ರಸಾದತೃಪ್ತಿ ಮಹಾನುಭಾವನಿರ್ಭಾವತೃಪ್ತಿ ಯೆಂಬ ಐಕ್ಯನಂಗವಾರು;

ಇಂತಿವರಲ್ಲಿ ಅಂತರ್ಗತವಾದ ಲಿಂಗಸ್ಥಳ ಷಟ್ತ್ರಿಂಶವವಕ್ಕೆ ವಿವರ– ಕ್ರಿಯೆ ಮಂತ್ರ ವೇದ ಯಜನ ಭಾವನ ನಿರೀಕ್ಷಣೆಯೆಂಬ ಆಚಾರಲಿಂಗಸ್ಥಳವಾರು, ಕ್ರಿಯಾದೀಕ್ಷೆ ಮಂತ್ರದೀಕ್ಷೆ ವೇಧದೀಕ್ಷೆ ಬೋಧದೀಕ್ಷೆ ಪ್ರಸನ್ನದೀಕ್ಷೆ ನಿರ್ವಾಣದೀಕ್ಷೆಯೆಂಬ ಗುರುಲಿಂಗ ಸ್ಥಲವಾರು; ಕರಸ್ಥಳ ಮನಸ್ಥಳ ಹೃದಯಸ್ಥಳ ಮಂತ್ರಸ್ಥಳ ತ್ರಿಕೂಟಸ್ಥಳ ಲಯಸ್ಥಳವೆಂಬ ಶಿವಲಿಂಗ ಸ್ಥಳವಾರು; ಸ್ವಯಂ ಸ್ವತಂತ್ರ ಚರ ಪರಿಣಾಮಿ ನಿರುಪಾಧಿಕ ಪರಿಪೂರ್ಣವೆಂಬ ಚರಲಿಂಗಸ್ಥಳವಾರು;ಇಂದ್ರಿಯಾನಂದ ಪ್ರಾಣಾನಂದ ಜ್ಞಾನಾನಂದ ಭಾವಾನಂದ ತೂರ್ಯಾನಂದ ಮಹದಾನಂದವೆಂಬ ಪ್ರಸಾದಲಿಂಗ ಸ್ಥಳವಾರು; ಪಿಂಡಾಕಾಶ ಬಿಂದ್ವಾಕಾಶ ಮಹದಾಕಾಶ ಭಾವಾಗಮ್ಯ ಸರ್ವತತ್ವಾಶ್ರಯ ಪರಿಪೂರ್ಣಪ್ರಕಾಶವೆಂಬ ಮಹಾಲಿಂಗಸ್ಥಳವಾರು; ಇಂತಿವು ಸ್ಥೂಲತನು ಸಂಬಂಧವಾಗಿಹವೆಂದರಿವುದು.

ಇನ್ನು ಈಶಾನ್ಯೇಂದ್ರದಿಕ್ಕಿನ ಮಧ್ಯದಳವಾದಿಯಾಗಿ ಅಷ್ಟದಳಂಗಳಲ್ಲಿ ನ್ಯಾಸವಾದ ಬ ಸ ವ·ಅ ಉ ಮ ಹ ಕ್ಷ ಯೆಂಬ ಅಷ್ಟಾಕ್ಷರಂಗಳೆ ಸತ್ತು ಚಿತ್ತು ಆನಂದ ನಿತ್ಯಪರಿಪೂರ್ಣ ತೇಜೋಮುಖ ನಾಮವನುಳ್ಳ ನಿರ್ಗುಣ ಅಷ್ಟಾವರಣಸ್ವರೂಪವೆಂದರಿವುದು.

ಇನ್ನು ಜ್ಞಾನಮುದ್ರಾಲಕ್ಷಣ:—ಬ್ರಹ್ಮಾಂಡವೆ ಕಿರೀಟವು, ಗಗನವೇ ಮುಖ, ಸಮಸ್ತದಿಕ್ಕುಗಳೇ ಭುಜಂಗಳೂ ಭುಜಕೀರ್ತಿಗಳು, ಚಂದ್ರಸೂರ್ಯ

ರೆ ನೇತ್ರಂಗಳು. ನಿರವಯಸ್ವರೂಪವೇ ಶರೀರವು, ಪಾತಾಳವೇ ಪಾದಾರವಿಂದವು, ಕರಸ್ಥಳದಲ್ಲಿ ಶೂನ್ಯಲಿಂಗವು, ಸಮಸ್ತ ಮೇಘಂಗಳೇ ಜಡೆಗಳು, ಚಂದ್ರಜ್ಯೋತ್ಸ್ನೆಯೇ ಭಸ್ಮಲೇಪನವು,ಸಮಸ್ತವೇದಂಗಳೇ ಸತ್ಕ್ರಿಯೆಗಳು,ನಕ್ಷತ್ರಂಗಳೆ ಪುಷ್ಪಮಾಲೆಗಳು,ಕುಲಪರ್ವತಂಗಳೇ ರುದ್ರಾಕ್ಷಾಭರಣಗಳು,ಸಮುದ್ರಂಗಳೇಕಮಂಡಲು,ಸೃಷ್ಟಿಮಯವಾದ ಜಗತ್ತೇಕಂಥೆ ಪೃಥ್ವಿಯೇ ಸಿಂಹಾಸನವು,ದಿವಾರಾತ್ರೆಗಳೇ ಅಕಲ್ಪಿತ ಮಠವು, ತ್ರಿಕಾಲಂಗಳೇ ಜ್ಞಾನಸಂಪತ್ತು ಷಡುರುತುಗಳೇ ಷಡುಸ್ಥಳಂಗಳು, ಮಹಾಶೇಷನೇ ಕಟಿನಸೂತ್ರವು. ಸಮಸ್ತಶಿವಮಂತ್ರವಿದ್ಯೆಯೇ ಜ್ಞಾನಮುದ್ರೆ, ಮೇರುಗಿರಿಯೇ ದಂಡಕೋಲು,ಗುಣತ್ರಯವೇ ಕಪ್ಪರ, ಕುಲವೇ ಶಿವಕುಲವು, ವನಸ್ಪತಿಗಳೇ ರೋಮಂಗಳು,ಇಂತಪ್ಪ ಅನಾದಿಜಂಗಮವು ತನ್ನ ಮುಖ ಬಾಹು ತೊಡೆ ಪಾದಾದಿ ಅವಯವಂಗಳಲ್ಲಿ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ ಮೊದಲಾದ ಸಕಲಜಗತ್ತಂ ನಿರ್ಮಿಸಿ ತಾನು ಜಗದ್ಧಿತಾರ್ಥಮಾಗಿ ಸಾಕಾರಮಂ ಧರಿಸಿ ಸರ್ವಲಕ್ಷಣಸಂಪೂರ್ಣನಾಗಿರ್ಪ.

ಜಂಗಮಸ್ವರೂಪ ಸಂಬಂಧವೆಂತೆಂದೊಡೆ

ಪಾದತಳದಲ್ಲಿ ಅತಳಲೋಕ,ಪಾದೋರ್ಧ್ವದಲ್ಲಿ ವಿತಳಲೋಕ,ಜಂಘೆಯಲ್ಲಿ ಸುತಳಲೋಕ, ಜಾನುವಿನಲ್ಲಿ ಮಹೀತಳಲೋಕ, ಊರುವಿನಲ್ಲಿ ತಳಾತಳಲೋಕ, ಗುಹ್ಯದಲ್ಲಿ ರಸಾತಳಲೋಕ ಕಟಿಯಲ್ಲಿ ಪಾತಾಳಲೋಕ, ನಾಭಿಯಲ್ಲಿ ಭೂಲೋಕ, ಕುಕ್ಷಿಯಲ್ಲಿ ಭುವರ್ಲೋಕ, ಹೃದಯದಲ್ಲಿ ಸುವರ್ಲೋಕ,ವಕ್ಷದಲ್ಲಿ ಮಹರ್ಲೋಕ,ಕಂಠದಲ್ಲಿ ಜನೋಲೋಕ, ಲಲಾಟದಲ್ಲಿ ತಪೋಲೋಕ, ಮೂರ್ಧ್ನದಲ್ಲಿ ಸತ್ಯಲೋಕ; ಇಂತಿವಾದಿಯಾಗಿ ಬ್ರಹ್ಮಾಂಡದ ಗುಣಂಗಳೆಲ್ಲವ ತನುಗುಣಂಗಳಲ್ಲಿ ಅಡಗಿಸಿಕೊಂಡು, ನಾನಾ ಜಗದುತ್ಪತ್ತಿ ಸ್ಥಿತಿಲಯರಹಿತನಾಗಿ ಗುಣತ್ರಯರೂಪವಾದ ತ್ರಿಮೂರ್ತ್ಯಾತ್ಮಕವೆನಿಪ ಜಂಗಮವೆಂಬಕ್ಷರತ್ರಯವೆ ನಾಮಸಂಜ್ಞೆಯಾಗಿ, ಮತ್ತಂ ದೀರ್ಘವೇ ಶಿರಸ್ಸು, ಬಿಂದುವೇ ಮುಖ,ಹ್ರಸ್ವಶೃಂಗಂಗಳೇ ಭುಜಂಗಳು,ಹಕಾರವೆ ದೇಹ, ಅವೃತರೇಖೆಯೇ ಪದಂಗಳಿಂತಪ್ಪ ಮಂತ್ರವಿಗ್ರಹಮೂರ್ತಿಯ ಶಿರದಲ್ಲಿ ಓಂಕಾರ, ತ್ವಕ್ಕಿನಲ್ಲಿ ವಕಾರ, ಶ್ರುತಿಪುಟದಲ್ಲಿ ಯಕಾರ, ನೇತ್ರಯುಗ್ಮದಲ್ಲಿ

ಶಿಕಾರ, ಜಿಹ್ವೆಯಲ್ಲಿ ಮಕಾರ, ನಾಸಾಪುಟದಲ್ಲಿ ನಕಾರ, ಬಳಿಕೀಷಡಕ್ಷರಿಯೇ ಮುಖ,ಭುಜಯುಗ್ಮ ದೇಹ ಮಧ್ಯ ಪಾದದ್ವಯ,ಷಡಾಧಾರಂಗಳಲ್ಲಿ ಸಂಬಂಧ ವಾಗಿರ್ಪ ಕಾರಣ, ಹಸ್ತಪಾದ ಅಂಗುಲಿಗಳಲ್ಲಿ ಪಂಚಾಕ್ಷರಂ ನ್ಯಾಸವಾಗಿ ರ್ಪವು.

ಇಂತೀ ಮೂವತ್ತೆಂಟು ಪ್ರಣವ ಸ್ವರೂಪವಾಗಿ ತನ್ನ ತಾ ಸ್ಮರಿಸಿ ಕೊಳ್ಳುತಿರ್ಪ ಜಂಗಮದ ಜಪಪೂಜಾ ಲಕ್ಷಣವೆಂತೆಂದೊಡೆ:—ಕರಸ್ಥಳದಲ್ಲಿ ಶಿವಲಿಂಗವು ಬಾಹ್ಯೋಪಚಾರಂಗಳಲ್ಲಿ ಲೋಲುಪ್ತವಾಗಿ, ಅಂತರಂಗಕ್ಕೆ ವೇಧಿಸಿ, ಷಡಾಧಾರ ಚಕ್ರಂಗಳಲ್ಲಿ ಚತುರ್ವಿಧ ಬಿಂದು ಲಿಂಗ, ಷಡ್ವಿಧಧಾತು ಲಿಂಗ, ದಶವಿಧಕ್ಷೇತ್ರಲಿಂಗ, ದ್ವಾದಶ ವಿಕೃತಲಿಂಗ, ಷೋಡಶಕಲಾಲಿಂಗ ಆತ್ಮವಿದ್ಯಾಲಿಂಗ ವೆಂದಾರು ತೆರನಾಗಿರ್ಪವಾ ಲಿಂಗಂಗಳ ಅಂತರಂಗದಲ್ಲಿ ಚಿದಕ್ಷಮಣಿಗಳಾಗಿರ್ಪ ವವಕ್ಕೆ ವಿವರ:—ಕಂಠಸ್ಥಾನದ ಸ್ವರಾಕ್ಷರಸ್ವರೂಪವಾದ ಶ್ರೀಕಂಠಾದಿಪದಿನಾರುರುದ್ರರು, ವಿಕಲ ಕ್ಷರಾದಿದೇವತೆಗಳೆನಿಸುವ ಅನಾಹತಾಕ್ಷರ ಸ್ವರೂಪವಾದ ಕ್ರೋಧೀಶಾದಿ ದ್ವಾದಶರುದ್ರರು, ಮಣಿಪೂರಕಾಕ್ಷರಸ್ವರೂಪವಾದ ದಾರುಕಾದಿ ದಶರುದ್ರರು, ಸ್ವಾಧಿಷ್ಠಾನಕ್ಷರ ಸ್ವರೂಪವಾದ ಶಿಖಿಯಾದಿ ಷಡುರುದ್ರರು,ಆಧಾರಾದಿ ಅಕ್ಷರಸ್ವರೂಪವಾದ ಪಿನಾಕೀಶಾದಿ ನಾಲ್ವರುದ್ರರು, ಆಗ್ನೇಯ ಚಕ್ರಾಕ್ಷರ ಸ್ವರೂಪವಾದ ಶಿವ ಸಂವರ್ತಕರೆಂಬೀರ್ವ ರುದ್ರರು, ತ್ರಿಶೂಲಕಪಾಲಂಗಳಂಧರಿಸಿ,ರಕ್ತವರ್ಣಶರೀರದಿಂದಿರ್ಪ ರೀರುದ್ರಬೀಜಾಕ್ಷರಂಗಳೈವತ್ತು ಲೋಮವಿಲೋಮದೊಳೆಣಿಸೆ ಶತರುದ್ರ ಬೀಜಂಗಳಾಗಿಹವವರಲ್ಲಿ ಓಂ ಹ್ರಾಂ ಹ್ರೀಂ ನ ಮ ಶಿ ವಾ ಯ ಎಂಬ ಮಾಯಾಖ್ಯಂಗೂಡೆ ನೂರೆಂಟು ರುದ್ರಬೀಜಂಗಳಾಗಿ ಚಿದ್ರುದ್ರಾಕ್ಷೆಗಳೆನಿಸಿರ್ಪವು. ಇವು ತಾವೆ ಮರಳಿ ನೂರೆಂಟು ಶಕ್ತಿ ಬೀಜಂಗಳಾಗಿರ್ಪವದೆಂತೆಂದೊಡೆ:—ವಿಶುದ್ಧಿ,ಅಕ್ಷರಸ್ವರೂಪವಾದ ಪೂರ್ಣೋದರಿ ಮೊದಲಾದ ಷೋಡಶಶಕ್ತಿಯರು,ವಿಕಲಕ್ಷರ ಸ್ವರೂಪಿಯರೆನಿಸುವ ಅನಾಹತಾಕ್ಷರ ಸ್ವರೂಪರಾದ ಮಹಾಕಾಳಿ ಮೊದಲಾದ ದ್ವಾದಶ ಶಕ್ತಿಯರು,ಮಣಿಪೂರಕಾಕ್ಷರ ಸ್ವರೂಪರಾದ ವಿರಜೆ ಮೊದಲಾದ ಹತ್ತು ಶಕ್ತಿಯರು, ಸ್ವಾಧಿಷ್ಠಾನಕ್ಷರ ಸ್ವರೂಪವಾದ ವಾಗ್ಜಯೆ ಮೊದಲಾದ ಆರುಶಕ್ತಿಯರು, ಆಧಾರಕ್ಷರ ಸ್ವರೂಪವಾದ ವಾರುಣಿ ಮೊದಲಾದ ನಾಲ್ವರು ಶಕ್ತಿಯರು,ಆಗ್ನೇಯಚಕ್ರಾಕ್ಷ

ರ ಸ್ವರೂಪರಾದ ವ್ಯಾಪಿಸಿ ಮಾಯಾನ್ವಿತೆಯೆಂಬುಭಯಶಕ್ತಿಯದು, ಮಾಯಾಖ್ಯಂಗೂಡಿ,ಮೊದಲೆಣಿಸಿದೊಲೆಣಿಸಲುನೂರೆಂಟುಶಕ್ತಿಗಳಾಗಿ ಚಿದ್ಗ್ರಂಥಿಗಳೆಸಿಸಿ ಸಿಂಧೂರದೋಪಾದಿಯ ಶರೀರದಿಂ, ಕೆನ್ನಿಯ್ದಿಲು ಕಪಾಲಂಗಳಂ ಧರಿಸಿದ ಹಸ್ತಂಗಳಿಂ, ನೂರೆಂಟುರುದ್ರರಿಗೆ ಸತೀಭಾವದಿಂದಿರ್ಪರೆಂಬವ ಧರಿಪ್ರುದು. ಬಳಿಕ ಲಿಂಗವೇ ಮಂತ್ರ,ಮಂತ್ರವೇ ಚಿತ್ತುವೆಂದು ತಿಳಿದು ಜಪಿಸಲು, ಪ್ರಾಣವಾಯುವಿಕಾರವಳಿದು, ಸುಜ್ಞಾನಸೂತ್ರವಾಗಿರ್ಪುದದಕ್ಕೆ ಆ ನೂರೆಂಟು ಚಿದ್ರುದ್ರಾಕ್ಷಿಗಳಂ,ಅವರ ಮಧ್ಯದಲ್ಲಿ ಅನೂರೆಂಟು ಚಿದ್ಗ್ರಂಥಿಗಳಂ ಸಂಬಂಧಿಸಿದೊಡೆ:— ಅಂತುಮಲ್ಲದೆ ಇನ್ನೊಂದು ಪ್ರಕಾರ.ಅಂತರಂಗದಲ್ಲಿ ಹವಳದ ಮಣಿಯೋಪಾದಿಯಲ್ಲಿ ಪ್ರಕಾಶಿಸುತಿರ್ಪ ಊರ್ಧ್ವಕುಂಡಲಿಯೆಂಬ ಸೂತ್ರದಂತೆ ಪವಣಿಸಲು,ತತ್ಕಾರೋಹಾವರೋಹದಿಂ ನೂರೆರಡು ವರ್ಣಂಗಳೊಳಗೆ ಹಂ ಸ ಎಂಬೆರಡಕ್ಷರಗಳಂ ಮೇರುಪಿಗೆ ತೆಗೆಯಲಾಗಿ,ಮಿಕ್ಕನೂರುವರ್ಣಂಗಳು ಅಷ್ಟವರ್ಗಾಕ್ಷರಂಗಳಂ ಕೂಡಿ ಪೂರ್ವೋಕ್ತ ಕ್ರಮದಿಂ ಜಪಿಸಲು,ಏಕವಿಂಶತಿ ಸಹಸ್ರ ಷಟ್ಛತ ಜೀವಜಪವರಿತು ರೇಚಕವೇ ಪಂಚಾಕ್ಷರಿ,ಪೂರಕವೆ ಓಂಕಾರ, ಕುಂಭಕವೆ ಚಿಚ್ಛಕ್ತಿ ಸ್ವರೂಪಿಸಿಂ,ಉಕಾರ ಅಕಾರ ಮಕಾರವೆಂಬಕ್ಷರ ತ್ರಯಂಗಳನೊಳಕೊಂಡು, ಶಿವಜಪ ವಾಯಿತು. ಅದು ನಿಮಿತ್ತಂ ಬಹಿರಂಗದಲ್ಲಿ ಗೋಮುಖ ವೃತ್ತವಾದ ಜಪಮಾಲಾಲಕ್ಷಣವನರಿದು ಧರಿಸಲಾಯಿತು. ಅನಾದಿಜಂಗಮೋದ್ಧರಣೆಯ ಸಂಬಂಧ ಸಮಾಪ್ತ ಮಂಗಳಮಹಾ.

---

ಗುರುಭ್ಯೋನಮಃ

## ಮ ಕು ಟೋ ದ್ಧ ರ ಣೆ.

ಇಂತೀ ಸಕಲ ನಿಷ್ಕಲ ಸ್ವಭಾವ ಚಾರಿತ್ರವನೊಳಕೊಂಡು, ನಿರಾಲಂಬ ನಿಜಚೈತನ್ಯಸ್ವರೂಪವಾದ ಅನಾದಿಜಂಗಮದ ಮಕುಟೋದ್ಧರಣೆಯ ಸಂಬಂಧವೆಂತೆಂದೊಡೆ:—ಮಧ್ಯಸ್ಥಾನದ ಶಿವಲಿಂಗಾಕೃತಿಯೇ ಶಿಖಾಗ್ರದ ಶೂನ್ಯಲಿಂಗ,ಸಪ್ತಾವರಣದ ರೇಖೆಗಳೆ ಶಿರಜಟಾಬಂಧ,ಅಷ್ಟೋತ್ತರಶತದಳ ನ್ಯಾಸಂಗಳೇ ಕೇಶಕೋಶಂಗಳು; ಇಂತಿವರ ಮಂತ್ರಾಕ್ಷರ ಸಂಬಂಧವೆಂ

ತೆಂದೊಡೆ:—ಲಿಂಗವ ಬಳಸಿರ್ದ ಬಟುವಿನಲ್ಲಿಹ ಅಷ್ಟದಳಂಗಳಲ್ಲಿ ಬ ಸ ವ ಹ್ರಾಂ ಹ್ರಿಂ ಹ್ರೂಂ ಹ್ರೇಂ ಹ್ರೌಂ ಎಂಬ ಬಕಾರಾದಿ ಹ್ರೌಂಕಾರಾಂತ್ಯಮಾದ ಅಷ್ಟಾಕ್ಷರ ನ್ಯಾಸವಾಗಿಹವು. ಅದರಿಂ ಮೇಲಣ ಬಟುವಿನಲ್ಲಿಹ ದ್ವಾದಶದಳಂಗಳಲ್ಲಿ ಹ್ರಃ ಅ ಉ ಮ ಓಂ ಯ ವ ಶಿ ಮ ನ ಓಂ ನ ಎಂಬ ಹ್ರಕಾರಾದಿನ ಕಾರಂತ್ಯಮಾದ ದ್ವಾದಶಾಕ್ಷರಂ ನ್ಯಾಸವಾಗಿಹವು. ಅದರಿಂ ಮೇಲಣ ಬಟುವಿನಲ್ಲಿಹ ಷೋಡಶದಳಂಗಳಲ್ಲಿ ಮ ಶಿ ವ ಯ ಓಂ ಹ್ರಾಂ ಹ್ರೀಂ ಹ್ರೂಂ ನ ಮ ಶಿ ವಾ ಯ ಓಂ ಹ್ರೈಂ ನ ಎಂಬ ಮಕಾರಾದಿ ನಕಾರಾಂತ್ಯಮಾದ ಷೋಡಶಾಕ್ಷರಂ ನ್ಯಾಸವಾಗಿಹವು. ಅದರಿಂಮೇಲಣ ಬಟುವಿನಲ್ಲಿಹ ಇಪ್ಪತ್ತುದಳಂಗಳಲ್ಲಿ ವಾ ಯ ಹ್ರೌಂ ಹ್ರಃ ಓಂ ಹ್ರಾಂ ಹ್ರೀಂ ನ ಮ ಶಿ ವಾ ಯ ಓಂ ಹ್ರುಂ ಹ್ರೈ ಹ್ರೌಂ ಹ್ರ:ನ ಮ ಶಿ;ಎಂಬ ವಕಾರಾದಿ ಶಿಕಾರಂತ್ಯಮಾಡ ಇಪ್ಪತ್ತಕ್ಷರಂ ನ್ಯಾಸವಾಗಿಹವು. ಇವುಮೂಲ ಮಂತ್ರಂಗಳೆನಿಸುವವು.ಅದರಿಂದ ಮೇಲಣ ಬಟುವಿನಲ್ಲಿಹ ಇಪ್ಪತ್ತುನಾಲ್ಕು ದಳಂಗಳಲ್ಲಿ,ಅ ಆ ಇ ಈ ಉ ಊ ಋ ೠ ಌ ೡ ಎ ಏ ಐ ಓ ಓ ಔ ಅಂ ಅಃ ಕ ಖ ಘ ಙ ಚ ಛ ಜ ಎಂಬ ಅಕಾರಾದಿ ಜಕಾರಂತ್ಯಮಾದ ಇಪ್ಪತ್ತುನಾಲ್ಕು ಅಕ್ಷರಂ ನ್ಯಾಸವಾಗಿಹವು. ಅದರಿಂ ಮೇಲಣ ಬಟುವಿನಲ್ಲಿಹ ಇಪ್ಪತ್ತೆಂಟು ದಳಂಗಳಲ್ಲಿ ಝ ಞ ಟ ಠ ಡ ಢ ಣ ತ ಥ ದ ಧ ನ ಪ ಫ ಬ ಭ ಮ ಯ ರ ಲ ವ ಶ ಷ ಸ ಹ ಳ ಕ್ಷ, ಅವಾಗ್ಜವೆಂದೊಡೆ ವಾಚ್ಯಕ್ಕೆ ಬಾರದ ನಿರಂಜನ ಹಕಾರವು, ನಾದಬಿಂದು ಸಮೇತವಾಗಿ,ಸರ್ವಮಂತ್ರ ತತ್ವಾಧಾರಮಪ್ಪುದರಿಂ ಅಂತ್ಯನ್ಯಾಸ; ಝಕಾರಾದಿ ಕ್ಷಕಾರಂತ್ಯಮಾದ ಇಪ್ಪತ್ತೆಂಟಕ್ಷರಂ ನ್ಯಾಸವಾಗಿಹವು. ಇಂತಿವರಲ್ಲಿ ಸರ್ವಮಂತ್ರಗಳಂತರ್ಗತವಾದ ಕಾರಣ ಬೀಜಾಕ್ಷರ ಮಂತ್ರಂಗಳೆನಿಸಿದುವು. ಇಂತಿವರ ಉತ್ಪತ್ತಿಯೆಂತೆಂದೊಡೆ:—ನಿಷ್ಕಲಪ್ರಣವದಿಂ ಬಸವಾಕ್ಷರತ್ರಯ, ಷಡ್ವಿಧಮೂಲಪಂಚಾಕ್ಷರ ಸ್ಥೂಲಪಂಚಾಕ್ಷರ ಸೂಕ್ಷ್ಮ ಪಂಚಾಕ್ಷರ ಮಾಯಾಖ್ಯ ಪಂಚಾಕ್ಷರ ಪ್ರಸಾದ ಪಂಚಾಕ್ಷರ ನಾದಬಿಂದುವೆಂಬ ಹಕಾರ ಸಕಾರ, ಅವಾಗ್ಜವೆಂಬ ನಿರಂಜನ ಹಕಾರ, ಇಂತೀ, ಐವತ್ತೆಂಟು ಪ್ರಣವಗಳುದಯಿಸಿದುವು. ಓಂಕಾರದಿಂ ಕ್ಷಕಾರ ಳಕಾರ ಹಕಾರಂಗಳು, ಯಕಾರದಿಂ ಅಕಾರಾದಿ ಷೋಡಶವರ್ಣಂಗಳು, ವಕಾರದಿಂ ಕಕಾರಾದಿ ದ್ವಾದಶ ವರ್ಣಂಗಳು, ಶಿಕಾರದಿಂ ಡಕಾರಾದಿ

ದಶವರ್ಣಗಳು, ಮಕಾರದಿಂ ಬಕಾರಾದಿ ಷಡ್ವರ್ಣಂಗಳು, ನಕಾರದಿಂ ವಕಾರಾದಿಚತುರ್ವರ್ಣಂಗಳು ಉದಯಿಸಿದುವು. ಇಂತೀ ನೂರೊಂಭತ್ತು ಪ್ರಣವಂಗಳೊಳಗೆ ಅಕಾರವು ಹಕಾರಾಂತರ್ಗತವಾದುದರಿಂ ನೂರೆಂಟು ಪ್ರಣವಂಗಳು ಗಣನೆಗೆ ಸಂಡವು. ಅದುಕಾರಣ ಜಂಗಮದ ಮಕುಟವು ಸರ್ವಮಂತ್ರ ತತ್ವಾಲಯವೆಂದರಿವುದು

ಇನ್ನು ಸೃಷ್ಟಿಯ ಕ್ರಮ

ಮಕುಟದಿಂ ಶೂನ್ಯ, ಆ ಶೂನ್ಯದಿಂ ಚಿದಂಬರ, ಆ ಚಿದಂಬರದಿಂ ಶಿವಶಕ್ತಿ, ಆ ಶಿವಶಕ್ತಿಯಿಂ ಪರಶಕ್ತಿ, ಆ ಪರಶಕ್ತಿಯಿಂ ಆದಿಶಕ್ತಿ, ಆ ಆದಿಶಕ್ತಿಯಿಂ ಇಚ್ಛಾಶಕ್ತಿ ಆ ಇಚ್ಛಾಶಕ್ತಿಯಿಂ ಜ್ಞಾನಶಕ್ತಿ, ಆ ಜ್ಞಾನಶಕ್ತಿಯಿಂ ಕ್ರಿಯಾಶಕ್ತಿ, ಆ ಕ್ರಿಯಾಶಕ್ತಿಯ ಸಹಸ್ರಾಂಶದಿಂ ನಾದಕೋಟಿ, ಆ ನಾದಪಂಚಕದ ಸಹಸ್ರಾಂಶದಿಂ ಪಂಚಸದಾಖ್ಯ, ಆ ಪಂಚಸದಾಖ್ಯತತ್ವದ ಸಹಸ್ರಾಂಶದಿಂ ಈಶ್ವರಾಷ್ಟಕ, ಆ ಈಶ್ವರನ ಸಹಸ್ರಾಂಶದಿಂ ಮಹೇಶ್ವರ ಪಂಚವಿಂಶತಿ, ಆ ಮಹೇಶ್ವರನ ಸಹಸ್ರಾಂಶದಿಂ ರುದ್ರೇಕಾದಶ, ಆ ರುದ್ರನ ಸಹಸ್ರಾಂಶದಿಂ ವಿಷ್ಣುದಶ, ಆ ವಿಷ್ಣುವಿನ ಸಹಸ್ರಾಂಶದಿಂ ಬ್ರಹ್ಮಾನವ, ಆ ಬ್ರಹ್ಮನವ ಸಹಸ್ರಾಂಶದಿಂ ಸ್ಥಾವರಜಂಗಮಾತ್ಮಕವಾದ ಸಕಲ ಜಗದುತ್ಪತ್ತಿಯಾಗಿಪ್ಪುದೆಂದರಿವುದು. ಮಕುಟೋದ್ಧರಣೆಯ ಸಂಬಂಧ ಸಮಾಪ್ತಮಂಗಳಮಹಾ.

---

ಗುರುಭ್ಯೋನಮಃ

ಶೂನ್ಯಲಿಂಗೋದ್ಧರಣವು.

ಇಂತು ಸರ್ವ ಮಂತ್ರಾಲಯವಪ್ಪ ಅನಾದಿಜಂಗಮದ ಮಕುಟದಿಂದುದಯವಾದ ಶೂನ್ಯಲಿಂಗೋದ್ಧರಣೆಯ ಸಂಬಂಧವೆಂತೆಂದೊಡೆ:— ಮಾತೃಪಿತೃ ಸಹೋದರ ಬಂಧು ಸತೀಸುತ ಕುಲ ಗೋತ್ರ ನಾಮರೂಪ ತನುಕರಣಾದಿ ಭೋಗಭುವನ ಕಾಲ ಕಲ್ಪಿತ ಮಾಯೋಪಾಧಿಗಳಿಲ್ಲದೆ, ಬಾಹ್ಯಾಭ್ಯಂತರ ದಿಕ್ಕು ವಿದಿಕ್ಕು ಆದ್ಯಂತರಹಿತವಾಗಿ ಜ್ವಲಿಸುತಿರ್ದ ಕಾಲಾಗ್ನಿಯೋಪಾದಿಯ ಕಾಂತಿಯಂ ಕೋಟಿ ಮಿಂಚುಗಳ ಪ್ರಭಾಪುಂಜವನೊಳ

ಕೊಂಡು ಪ್ರಕಾಶಿಸುತಿರ್ದ ಶಿಖಾಗ್ರದ ಸೂಕ್ಷ್ಮ ಚಿತ್ಕಲಾಲಿಂಗವು ಭಾವ ಮನ ದೃಷ್ಟಿಗಳಿಂ ಬಹಿಷ್ಕರಿಸಿ ವೃತ್ತಗೋಳಕ ಗೋಮುಖಾಕಾರದಿಂ ವ್ಯಕ್ತೀಕರಿಸಿ, ಸರ್ವಲಕ್ಷಣ ಸಂಪೂರ್ಣವಾಗಿ, ಪರಮಲೀಲೋಲ್ಲಾಸ ಭಕ್ತಿ ಭಾವಭರಿತಾಂತಃಕರಣನಾಗಿರ್ಪ, ಅನಾದಿಜಂಗಮದ ವಾಮಕರಸ್ಥಲದಲ್ಲಿ ಸ್ಥಾಪ್ಯವಾಗಿರ್ಪುದು. ಇದನುದ್ಧರಿಸುವ ಕ್ರಮವೆಂತೆಂದೊಡೆ:–ಲಿಂಗಾಕಾರವಪ್ಪಂತೆ ಪೂರ್ವಾಪರಕ್ಕೆ ನೀಳರೇಖೆಗಳಾರನು, ದಕ್ಷಿಣೋತ್ತರಕ್ಕೆ ಅಡ್ಡ ರೇಖೆಗಳೆಂಟನು,ಮೇಲೆ ಗೋಳಕಾಕಾರವನು ಬರೆಯಲು, ಗೋಳಕಕ್ಕೆ ಎರಡು, ಊರ್ಧ್ವಪೀಠಕೊಂಭತ್ತು, ಅಧಃಪೀಠಕೊಂಭತ್ತು ಮನೆಗಳು ಪುಟ್ಟುವುವು. ಇವರ ಮಂತ್ರನ್ಯಾಸಕ್ರಮ:—ಗೋಳಕದ ಮನೆಯಲ್ಲಿ ನ್ಯಾಸವಾದ ಹಕಾರವೆ ನಿರಂಜನತತ್ವ,ಅದರ ಕೆಳಗಣ ಮನೆಯ ನಾಳದಲ್ಲಿ ನ್ಯಾಸವಾದ ಕ್ಷಕಾರವೆ ಶೂನ್ಯತತ್ವ, ಅದರ ಕೆಳಗಣ ಮೂರುಮನೆಗಳೆ ವರ್ತುಳ,ಅಲ್ಲಿ ನ್ಯಾಸವಾದ ಬಸವಾಕ್ಷರವೆ ನಿಷ್ಕಲ ತತ್ವ,ಅದರದಕ್ಷಿಣದ ಮನೆಯಲ್ಲಿ ನ್ಯಾಸವಾದ ಉಕಾರವೆ ಈಶ್ವರತತ್ವ, ಉತ್ತರದಿಕ್ಕಿನ ಮನೆಯ ಗೋಮುಖದಲ್ಲಿ ನ್ಯಾಸವಾದ ಮಕಾರವೆ ಸದಾಶಿವತತ್ವ, ಅದರ ಕೆಳಗಣ ಮೂರುಮನೆಗಳೆ ವರ್ತುಳದಂಡ, ಅಲ್ಲಿ ನ್ಯಾಸವಾದ ಯಕಾರ ಓಂಕಾರ ವಕಾರಂಗಳೆ ಮಹಾಸದಾಖ್ಯ, ಶಿವಸದಾಖ್ಯ ಅಮೂರ್ತಿಸದಾಖ್ಯ, ಅದರ ಕೆಳಗಣ ಮನೆಯೆ ಮಧ್ಯ. ಅಲ್ಲಿ ನ್ಯಾಸವಾದ ಅಕಾರವೆ ರುದ್ರತತ್ವ. ಇಂತಿವು ಊರ್ಧ್ವಮುಖನ್ಯಾಸ ಶಿವಬೀಜಂಗಳೆಂದರಿವುದು. ಅದರ ಕೆಳಗಣ ಮನೆಯಲ್ಲಿ ನ್ಯಾಸವಾದ ಶಿಕಾರವೆ ಇಚ್ಛಾಶಕ್ತಿ, ಅದರಕೆಳಗಣ ಮೂರುಮನೆಗಳೆ ಖಂಡಿಕಾದಂಡ, ಅಲ್ಲಿ ನ್ಯಾಸವಾಗಿರ್ಪ, ನಕಾರ ಓಂಕಾರ ಮಕಾರವೆ ಕ್ರಿಯಾಶಕ್ತಿ, ಚಿಚ್ಛಕ್ತಿ, ಜ್ಞಾನಶಕ್ತಿ, ಅದರಕೆಳಗಣ ಐಯ್ದುಮನೆಗಳೆ ಶಕ್ತಿಪೀಠ, ವಲ್ಲಿನ್ಯಾಸವಾದ, ನ ಮ ಶಿ ವಾ ಯ, ಎಂಬ ಪಂಚಾಕ್ಷರಂಗಳೆ, ಪಂಚಶಕ್ತಿ; ಇಂತಿವು ಅಧೋಮುಖನ್ಯಾಸ.ಶಕ್ತಿ ಬೀಜಂಗಳೆಂದರಿವುದು.

ಮತ್ತಂ ಊರ್ಧ್ವಪೀಠಿಗೆಯಲ್ಲಿ ನ್ಯಾಸವಾದ ನಮಶ್ಶಿವಾಯ, ಎಂಬ ಪಂಚಾಕ್ಷರವೇ ಪಂಚಬ್ರಹ್ಮ. ವರ್ತುಳಮಧ್ಯದ ಓಂಕಾರವೇ ಪರಬ್ರಹ್ಮ, ಎಡಬಲದ ಕೆಳಗಣ ಬಸವಾಕ್ಷರವೇ ಶಿವ, ಸದಾಶಿವ, ಮಹೇಶ್ವರತತ್ವ. ಇಂತಿವು ಊರ್ಧ್ವಮುಖನ್ಯಾಸ ಶಿವಬೀಜಂಗಳೆದರಿವುದು. ಇನ್ನು ಅಧಃಪೀಠಿಕೆಯಲ್ಲಿ

ನ್ಯಾಸವಾದ ನಮಶ್ಶಿವಾಯ ಎಂಬ ಪಂಚಾಕ್ಷರಂಗಳೇ ಪಂಚಶಕ್ತಿ,ಖಂಡಿಕಾ ಖಂಡಮಧ್ಯದ ಓಂಕಾರವೆ ಚಿಚ್ಛಕ್ತಿ, ಆದರ ಎಡಬಲದ ಹಿಂದಣ ಅ ಉ ಮಾ ಕ್ಷರವೇ ಶಕ್ತಿತ್ರಯವು. ಇಂತಿವು ಅಧೋಮುಖನ್ಯಾಸ ಶಕ್ತಿಬೀಜಂಗಳೆಂದರಿ ವುದು. ಲಿಂಗಲಕ್ಷಣ, ಉಪದೇಶಕ್ರಮ:—ಇನ್ನು ಲಿಂಗಗೋಳಕದಲ್ಲಿ ಅನಾದಿ ಜಂಗಮದ ಶೂನ್ಯಲಿಂಗ ಚಿದಂಬರ, ಶಿವಶಕ್ತಿ; ನಾಳದಲ್ಲಿ ಪಂಚಕಲೆ, ಪಂಚ ಶಕ್ತಿ, ಪಂಚಮುಖ,ಪಂಚಸದಾಖ್ಯ,ಪಂಚನಾದ, ಪಂಚಮೂರ್ತಿ; ಗೋಮು ಖದಲ್ಲಿ ಈಶ್ವರಾಷ್ಟಕ,ವರ್ತುಳದಲ್ಲಿ ಮಹೇಶ್ವರ ಪಂಚವಿಂಶತಿ,ಮಧ್ಯದಲ್ಲಿ ರು ದ್ರರೇಕಾದಶ,ಪೀಠದಲ್ಲಿ ತ್ರಯಾವಯವ ಹಿರಣ್ಯಗರ್ಭ ವಿರಾಣ್ಮೂರ್ತಿ, ಬ್ರ ಹ್ಮ ವಿಷ್ಣುಗಳಂ ಗರ್ಭೀಕರಿಸಿಕೊಂಡು ಷಡಧ್ವಜಗನ್ಮಾಯಾ ಭೂಮಿಯಾಗಿ ರ್ಪುದೆಂದರಿವುದು. ವಾಮಕರಸ್ಥಳದಲ್ಲಿ ಅಂಗುಷ್ಠಾಗ್ರದತ್ತಣ ಮುಖವಾಗಿ ಕನಿಷ್ಠಿಕಾ ಅನಾಮಿಕಾಂಗುಲಿಯಿಂ ಪಿಡಿವುದೀಗ ಧಾರಣಕ್ರಮ. ಇನ್ನು ಅ ಷ್ಟವಿಧಾರ್ಚನೆ ಮೊದಲಾದ ನಿತ್ಯನೇಮಪೂಜಾಮಹಾಕ್ರಿಯೆಗಳಲ್ಲಿ, ಸುಲಭ ವಾಗಿ ಯಥೋಚಿತ ಭಕ್ತಿ ಭಾವಸ್ವತಂತ್ರ ಲೀಲಾಚರಿತ್ರನಾಗಿ ಮಾಡುವು ದೆ ಯಥಾಪೂಜಾರತಿಯೀಗ ಅರ್ಚನಕ್ರಮ.ಮತ್ತಮೀಲಿಂಗದ ಷಟ್‌ಸ್ಥಾನಂ ಗಳಲ್ಲಿ ಶಿರ ಭುಜ ನಡು ಪಾದಂಗಳಲ್ಲಿ "ನಮಶ್ಶಿವಾಯ ಓಂ" ಎಂಬ ಮೂಲ ಮಂತ್ರ ಸಂಬಂಧವನು, ಆದಿಪ್ರಣವ ಅಕಾರಪ್ರಣವ ಉಕಾರಪ್ರಣವ ಮ ಕಾರಪ್ರಣವ ಬಿಂದುಪ್ರಣವ ನಾದಪ್ರಣವಸಂಬಂಧವನು, ನಾದಬಿಂದುಕ ಲಾಸಂಬಂಧವನರಿವುದು.

ವಚನ:—ನಿರಾಳ ಅಷ್ಟದಳಕಮಲದೊಳಗೆ ನಿರಂಜನ ಚೌಕ ಮಧ್ಯವ ನೋಡು! ಆದರ ಬೀಜಾಕ್ಷರದ ಭೇದವನಾರುಬಲ್ಲರೋ ನಿರಂಜನಪ್ರಣವ ಅವಾಚ್ಯಪ್ರಣವ ಕಲಾಪ್ರಣವ ಆದಿಪ್ರಣವ ಅನಾದಿಪ್ರಣವ ಅಕಾರಪ್ರ ಣವ ಉಕಾರಪ್ರಣವ ಅಖಂಡಜ್ಯೋತಿಃಪ್ರಣವ ಅಖಂಡಮಹಾಜ್ಯೋತಿಃ ಪ್ರಣವ ಗೋಳಕಾಕಾರಪ್ರಣವ ಅಖಂಡಗೋಳಕಾಕಾರಪ್ರಣವ ಅಖಂಡ ಮಹಾಗೋಳಕಾಕಾರಪ್ರಣವ; ಇಂತೀ ನಿರಾಳ ಅಷ್ಟದಳಕಮಲದೊಳಗೆ ನಿ ರಂಜನಚೌಕ ಮಧ್ಯವ ನೋಡು! ಇದರ ಬೀಜಾಕ್ಷರದ ಬೇದವ ನಿಜಲಿಂಗೈ

ಕ್ಯರೆ ಬಲ್ಲರಲ್ಲದೆ ಮಿಕ್ಕಿನ ವೇಷಧಾರಿಗಳೆತ್ತ ಬಲ್ಲರೈಯ್ಯ ಉರಿಲಿಂಗಪೆದ್ದಿ ಪ್ರಿಯವಿಶ್ವೇಶ್ವರ?—

ಮತ್ತಂ ವಾಚ್ಯ ಮೂಲಪಂಚಾಕ್ಷರ ಮೊದಲಾಗಿ ಪಂಚ ಪಂಚಾಕ್ಷರಿ ಮೂವತ್ತೆಂಟು ಪ್ರಣವಸಂಬಂಧವನರಿದು ಸ್ಮರಿಸುವುದೀಗ ಧ್ಯಾನಲಕ್ಷಣ. ಇನ್ನು ಪರಶಿವಲೀಲೆಗೊದಗಿದ ಸರ್ವಾಚಾರ ಸಂಪತ್ತು, ಅನಾದಿಚಿತ್ಸ್ವರೂಪವಾದ ಶರಣನ ತ್ಯಾಗಾಂಗದಲ್ಲಿ ನಿಂದು, ಭೋಗಾಂಗದಲ್ಲಿ ಬೆಳಗಿ, ಯೋಗಾಂಗದಲ್ಲಿ ಪ್ರಜ್ವಲಿಸಿ, ಇಷ್ಟಪ್ರಾಣಭಾವರೂಪವಾಗಿ ಗುರು ಲಿಂಗ ಜಂಗಮವೆನಿಸಿ, ಅವರ ಏಕಪ್ರಸನ್ನ ಪ್ರಸಾದ, ತದೇಕಚೈತನ್ಯರಸ ಪ್ರವಾಹವೇ ಪಾದೋದಕ, ತದ್ರೂಪವೇ ಭಕ್ತ, ಆ ಭಕ್ತನ ಅವಿರಳದರಿವೇ ಜಂಗಮ, ಆ ಜಂಗಮದ ಮೂಲಜ್ಞಾನವೇ ಶೂನ್ಯಲಿಂಗ, ಆ ಲಿಂಗದಿ ವಶವಾದ ರುದ್ರಾಂಕಮಾದ ಭಾವನಾಕಲಾಮೂರ್ತಿಗಳು ಆಬ್ರಹ್ಮಾದಿ ತೃಣಾಂತಮಾದ ಸಮಸ್ತಸೃಷ್ಟಿಗಳ ಉತ್ಪತ್ತಿಕಾರಣವಾಗಿಹುದು. ಇಂತಿವ ಗರ್ಭೀಕರಿಸಿಕೊಂಡಿರ್ಪ ಅನಾದಿಪಿಂಡದಲ್ಲಿ ಅಭಿನ್ನಜ್ಞಾನವು ಜನಿಸಿ, ಸಂಸಾರಹೇಯಮಾಡಿ, ಗುರುಕರುಣಮಂ ಪಡೆದು, ಲಿಂಗವಂಗದಲ್ಲಿ ಧರಿಸಿ,ವಿಭೂತಿರುದ್ರಾಕ್ಷಿಯ ಅಲಂಕರಿಸಿ, ಪ್ರಣವ ಪಂಚಾಕ್ಷರಿಯ ಜಪಿಸಿ, ಭಕ್ತಿಸ್ಥಲವನಂಗಂಗೊಂಡು, ಉಭಯಸ್ಥಲದಲ್ಲಿ ನಿಂದು, ತ್ರಿವಿಧ ಸಂಪನ್ನನಾಗಿ, ಚತುರ್ವಿಧ ಸಾರಾಯ ಸಾಂಗವಾಗಿ ಉಪಾಧಿಯನುಪದೇಶಿಸಿ ನಿರುಪಾಧಿಕನೆನಿಸಿ, ಸಹಜ ಮಾಟಪಿಡಿದು, ಗುರುಲಿಂಗ ಶಿವಲಿಂಗ ಚರಲಿಂಗ ತ್ರಿವಿಧ ತ್ರಿವಿಧದಲ್ಲಿ ಆಯತವಾಗಿ, ತ್ರಿವಿಧಷಡ್ವಿಧಷಡ್ವಿಂಶಾಂಗ ಲಿಂಗಾವಧಾನಿಯಾದ ಭಕ್ತನು:— ಆಚಾರಲಿಂಗದಲ್ಲಿ ಐಕ್ಯವಾಗಿ, ನೈಷ್ಠಿಕಾಮುಖದಿಂ ಮಹೇಶ್ವರಸ್ಥಲವನಂಗಂಗೊಂಡು, ಲಿಂಗನಿಷ್ಠಾಪರನಾಗಿ, ಪೂರ್ವಾಶ್ರಯ ವಾಗದ್ವೈತ ಅಹಂನ್ಮಾ, ಅಷ್ಟತನುಮೂರ್ತಿ, ಸರ್ವಗತನಿರಸನವಾಗಿ, ಶಿವಜಗನ್ಮಯನೆನಿಸಿ,ಭಕ್ತದೇಹಿಕಲಿಂಗವೆಂದಂಗೀಕರಿಸಿ, ಆಗಮಲಿಂಗ, ಕಾಯಿಕಲಿಂಗ, ಆಚಾರಲಿಂಗ, ತ್ರಿವಿಧ ತ್ರಿವಿಧದಲ್ಲಿ ಆಯತವಾಗಿ, ತ್ರಿವಿಧ ಷಡ್ವಿಧ, ಷಡ್ವಿಂಶಾಂಗ ಲಿಂಗಾವಧಾನಿಯಾದ ಮಹೇಶ್ವರನು:—ಗುರುಲಿಂಗದಲ್ಲಿ ಐಕ್ಯವಾಗಿ ಸಾವಧಾನಮುಖದಿಂ, ಪ್ರಸಾದಿಸ್ಥಲವನಂಗಂಗೊಂಡು, ಗುರು ಲಿಂಗ ಜಂಗಮ ಭಕ್ತ ಶರಣ

ಪ್ರಸಾದ ಮಹತ್ವವಿಡಿದು, ಅನುಗ್ರಹಲಿಂಗ, ಅರ್ಪಿತಲಿಂಗ, ತನುಗುಣಲಿಂಗ, ತ್ರಿವಿಧತ್ರಿವಿಧದಲ್ಲಿ ಆಯತವಾಗಿ, ತ್ರಿವಿಧ ಷಡ್ವಿಧ ಷಡ್ವಿಂಶಾಂಗಲಿಂಗಾವಧಾನಿಯಾದ ಪ್ರಸಾದಿ:-ಶಿವಲಿಂಗದಲ್ಲಿ ಐಕ್ಯವಾಗಿ, ಅನುಭಾವ ಮುಖದಿಂ, ಪ್ರಾಣಲಿಂಗಿಸ್ಥಲವನಂಗಂಗೊಂಡು, ಪ್ರಾಣಲಿಂಗವನರ್ಚಿಸಿ, ಶಿವಲಿಂಗ ಯೋಗದಲ್ಲಿ ಸಮಾಧಿಯನೆಯ್ದಿ, ಲಿಂಗ ನಿಜ ಮನೋ ಮೂರ್ತಿಯಾಗಿ, ಅಂಗ.ಲಿಂಗ ಸಂಬಂಧವಳವಟ್ಟು, ಒಲವು ಲಿಂಗ ನಿರೂಪ ಲಿಂಗ ಪ್ರಸಾದ ಲಿಂಗ ಪಾದೋದಕಲಿಂಗ, ತ್ರಿವಿಧ ತ್ರಿವಿಧದಲ್ಲಿ ಆಯತವಾಗಿ, ತ್ರಿವಿಧ ಷಡ್ವಿಧ, ಷಡ್ವಿಂಶಾಂಗ ಲಿಂಗಾವಧಾನಿಯಾದ ಪ್ರಾಣಲಿಂಗ! ಜಂಗಮಲಿಂಗದಲ್ಲಿ ಐಕ್ಯವಾಗಿ, ಆನಂದ ಮುಖದಿಂ ಶರಣಸ್ಥಲವನಂಗಂಗೊಂಡು, ತಾಮಸನಿರಸನವಾಗಿ, ನಿರ್ದೇಶವ ನೆಲೆಗೊಳಿಸಿ, ಶೀಲಸಂಪಾದನೆಯನರಿದು, ನಿಷ್ಪ್ರತಿಲಿಂಗ, ಆಕಾಶಲಿಂಗ, ಪ್ರಕಾಶಲಿಂಗ, ತ್ರಿವಿಧ ತ್ರಿವಿಧದಲ್ಲಿ ಆಯತವಾಗಿ, ತ್ರಿವಿಧ ಷಡ್ವಿಧ ಷಡ್ವಿಂಶಾಂಗಲಿಂಗಾವಧಾನಿಯಾದ ಶರಣನು; ಪ್ರಸಾದ ಲಿಂಗದಲ್ಲಿ ಐಕ್ಯವಾಗಿ, ಸಮರಸ ಮುಖದಿಂ, ಐಕ್ಯಸ್ಥಲವನಂಗಂಗೊಂಡು, ಸರ್ವಾಚಾರಸಂಪನ್ನನಾಗಿ, ಏಕಭಾಜನ ಸಹಭೋಜನವಳವಟ್ಟು,ಕೊಂಡುದೆ ಪ್ರಸಾದ, ನಿಂದುದೆ ಓಗರ, ಚರಾಚರನಾಸ್ತಿ ಎಂಬ ಗುರುಪ್ರಸಾದ, ತ್ರಿವಿಧ ಲಿಂಗ ಭಾಂಡ ಭಾಜನ ಅಂಗಲೇಪನವೆಂಬ ಲಿಂಗ ಪ್ರಸಾದ, ತ್ರಿವಿಧಲಿಂಗ ಸ್ವಯಪರನಾಸ್ತಿ ಭಾವ ಭಾವನಷ್ಟಜ್ಞಾನಲಿಂಗದಲ್ಲಿ ಶೂನ್ಯವೆಂಬ, ಜಂಗಮ ಪ್ರಸಾದ, ತ್ರಿವಿಧ ಲಿಂಗವಾಯತವಾದ ಐಕ್ಯನು; ಮಹಾಲಿಂಗದಲ್ಲಿ ಸಮರಸವಾಗಿ, ಅರಿವನರಿತು, ಮರಹು ನಷ್ಟವಾಗಿ, ನಿಜದಲ್ಲಿ ನಿಂದು, ನಿಬ್ಬೆರಗಾಗಿ, ನಿಶ್ಶಬ್ದ ಗಂಭೀರವಾಗಿರ್ಪ ಷಡುಸ್ಥಲ ಬ್ರಹ್ಮದಾಚರಣೆಯನರಿದು, ಲಿಂಗ ಷಡ್ವಿಧ, ತ್ರಿವಿಧ, ಉಭಯ ಏಕಸ್ಥಾನವನರಿದು ಸಂಬಂಧಿಸಿ, ಲಿಂಗಸುಖ ಸಂಪನ್ನನಾಗಿರ್ಪುದೀಗ ಅನುಭಾವ ಲಕ್ಷಣ.

## ಇನ್ನು ಸೃಷ್ಟಿನಿರ್ದೇಶ.

ಮತ್ತಂ, ಈ ಶೂನ್ಯಲಿಂಗದಿಂ ನಿಷ್ಕಲಲಿಂಗ, ಆ ನಿಷ್ಕಲಲಿಂಗದಿಂ ಪರಶಕ್ತಿ, ಆ ಪರಶಕ್ತಿಯಿಂ, ನಾದಬಿಂದುಗಳು, ಆ ನಾದಬಿಂದುಗಳಿಂ,

ಮಹಾಲಿಂಗ, ಆ ಮಹಾಲಿಂಗದಿಂ ಸದಾಶಿವೇಚ್ಛಾಶಕ್ತಿ, ಆ ಸದಾಶಿವೇಚ್ಛಾಶಕ್ತಿಯಿಂ ಈಶ್ವರಜ್ಞಾನಶಕ್ತಿ, ಆ ಈಶ್ವರಜ್ಞಾನಶಕ್ತಿಯಿಂ ರುದ್ರಕ್ರಿಯಾಶಕ್ತಿ, ಆ ರುದ್ರಕ್ರಿಯಾಶಕ್ತಿಯಿಂ ವಿಷ್ಣುಲಕ್ಷ್ಮಿಯರು, ಆ ವಿಷ್ಣುಲಕ್ಷ್ಮಿಯರಿಂ ಬ್ರಹ್ಮಸರಸ್ವತಿ, ಆ ಬ್ರಹ್ಮಸರಸ್ವತಿಯರಿಂ, ಜಗತ್ಸಚರಾಚರಂಗಳುದಯವಾದುವೆಂದರಿವುದು. ಶೂನ್ಯಲಿಂಗೋದ್ಧರಣೆಯ ಸಂಬಂಧ ಸಮಾಪ್ತ ಮಂಗಳಮಹಾ.

---

ಗುರುಭ್ಯೋನಮಃ.

## ಚಿ ದಂ ಬ ರೋ ದ್ಧ ರ ಣೆ.

ಇನ್ನು ಆನಾದಿ ಭಕ್ತನ ಹೃತ್ಕಮಲಕರ್ಣಿಕಾ ಪೀಠದಲ್ಲಿ, ಸ್ವತಸ್ಸಿದ್ಧವಾಗಿರ್ಪ ನಿರಂಜನ ಜಂಗಮದ ಮಕುಟದಿಂ ಜನಿಸಿದ ಶೂನ್ಯಲಿಂಗದಿಂದಾದ ಚಿದಂಬರವನುದ್ಧರಿಸುವ ಕ್ರಮವೆಂತೆಂದೊಡೆ:—ನವರಂಗಚೌಕದೋಪಾದಿಯಲ್ಲಿ ಲಕ್ಷಿಸಿ, ಪೂರ್ವಾಪರೋತ್ತರದಕ್ಷಿಣಕ್ಕೆ ದ್ವಾದಶರೇಖೆಗಳಂ, ಅವರ ತುದಿಯಲ್ಲಿ ತ್ರಿಶೂಲಂಗಳಂ, ಆ ಅಗ್ರದಲ್ಲಿ ಶ್ರೀಕಾರಂಗಳಂ, ಮಧ್ಯಚೌಕದಲ್ಲಿ ವೃತ್ತದ್ವಯಂಗಳಂ ಬರೆಯಲು ಯಂತ್ರನ್ಯಾಸ ಮುಗಿಯಿತು. ಇನ್ನು ವರ್ಣೋದಯನ್ಯಾಸಕ್ರಮ:—ದಿವ್ಯನಾದ, ನಿರಾವರಣಬಿಂದು,ನಿರುಪಮಕಲೆ, ಈ ತ್ರಿವಿಧಸ್ವರೂಪವು ಕಲೆಸಿ ಅವಾಗ್ಜಪ್ರಣವವಾಯಿತು. ಆ ಪ್ರಣವನಾದ ಚೈತನ್ಯವೇ ಬಕಾರವಾಯಿತು. ಆ ಬಕಾರ ಚಿನ್ನಾದವೇ ಅಕಾರ, ಚಿದ್ಬಿಂದುವೆ ಉಕಾರ, ಚಿತ್ಕಳೆಯೇ ಮಕಾರ, ಈ ತ್ರಿವಿಧವೇಕವಾಗಿ ಓಂಕಾರವಾಯಿತು. ಆ ಓಂಕಾರದ ಪಂಚಾಕೃತಿಗಳಿಂದುದಯವಾದ ಪಂಚಾಕ್ಷರವೇ ಲೋಮ ವಿಲೋಮದಿಂ ಸಕೀಲಸಂಬಂಧದಿಂ, ಅವಾಗ್ಜಂಗೂಡಿ ನೂರಮೂವತ್ತಾರು ವರ್ಣಂಗಳಾದುವು. ಇವರೊಳು ಹಕಾರವನೆ ಮಧ್ಯವೃತ್ತದಲ್ಲಿ, ನಮಶಿವಾಯ, ಯವಶಿಮನ, ಶಿವಾಯನಮಃ, ಎಂಬ ಪಂಚದಶವರ್ಣಂಗಳಂ ಮೇಲಣ ವೃತ್ತದಲ್ಲಿ ಪೂರ್ವದಿಕ್ಕು ಬಳಿಗೊಂಡು ಬಲಪ್ರದಕ್ಷಿಣವಾಗಿ ಬರೆದು, ಬಳಿಕ ಅಗ್ನಿದಿಕ್ಕಿನ ಮನೆಗಳಿಪ್ಪತ್ತೈದರಲ್ಲಿ, ನಮ

ಶಿವಾಯ, ವಾಯನಮಶಿ, ಮಶಿವಾಯನ, ಯನಮಶಿವಾ, ಶಿವಾಯನಮ, ಎಂಬ ಪಂಚ ವಿಂಶತಿವರ್ಣಂಗಳಂ,ಯಮದಿಕ್ಕಿನ ಮನೆಗಳೈದರಲ್ಲಿ,ಹ್ರಂ ಶ್ರಿಂ ಕ್ಷುಂ ಸೌಂ ಕ್ಲಿಂ, ಎಂಬ ಪಂಚವರ್ಣಂಗಳಂ, ನೈರುತ್ಯದಿಕ್ಕಿನ ಮನೆಗಳಿಪ್ಪತ್ತೈದರಲ್ಲಿ,ಯವಾಶಿಮನ,ಶಿಮನಯವಾ,ನಯವಾಶಿಮ,ವಾಶಿಮನಯ,ಮನಯವಾಶಿ, ಎಂಬ ಪಂಚವಿಂಶತಿ ವರ್ಣಂಗಳಂ, ವರುಣದಿಕ್ಕಿನ ಮನೆಗಳೈದರಲ್ಲಿ, ಕ್ಲಿಂ ಸೌಂ ಓಂ ಹ್ರೀಂ ಕ್ಷುಂ, ಎಂಬ ಪಂಚವರ್ಣಂಗಳಂ, ವಾಯವ್ಯದಿಕ್ಕಿನ ಮನೆಗಳಿಪ್ಪತ್ತೈದರಲ್ಲಿ, ಯಮವಾನಶಿ, ವಾನಶಿಯಮ, ಶಿಯಮವಾನ, ಮವಾನಶಿಯ, ನಶಿಯಮವಾ ಎಂಬ ಪಂಚವಿಂಶತಿವರ್ಣಂಗಳಂ, ಕುಬೇರದಿಕ್ಕಿನ ಮನೆಗ ಳೈದರಲ್ಲಿ.ಓಂ ಹ್ರೀಂ ಕ್ಷುಂ ಕ್ಲೀಂ ಸೌಂ ಎಂಬ ಪಂಚವರ್ಣಂಗಳಂ, ಈಶಾನ್ಯದಿಕ್ಕಿನ ಮನೆಗಳಿಪ್ಪತ್ತೈದರಲ್ಲಿ,ಶಿಯಮವಾನ, ವಾನಶಿಯಮ, ಯಮವಾನಶಿ,ನಶಿಯಮವಾ,ಮವಾನಶಿಯ ಎಂಬ ಪಂಚವಿಂಶತಿವರ್ಣಂಗಳಂಇಂದ್ರದಿಕ್ಕಿನ ಮನೆಗಳೈದರಲ್ಲಿ,ಕ್ಷುಂ ಕ್ಲಿಂ ಸೌಂ ಶ್ರಿಂ ಹ್ರಂ ಎಂಬ ಪಂಚವರ್ಣಂಗಳಂ ಬರೆಯಲು ವರ್ಣನ್ಯಾಸ ಮುಗಿಯಿತು. ಇನ್ನು ತತ್ವಸಂಬಂಧ:—ಪಂಚಶಕ್ತಿ,ಪಂಚಕಲೆ,ಪಂಚಸದಾಖ್ಯ, ಪಂಚಮುಖ ಪಂಚಮೂರ್ತಿ, ಈ ಇಪ್ಪತ್ತೈದೂಅಗ್ನಿ ದಿಕ್ಕಿನ ಮನೆಗಳ ವರ್ಣಸ್ವರೂಪ ಮಹೇಶ್ವರನ ನಿರ್ಗುಣಮೂರ್ತಿಯಿಪ್ಪತ್ತೈದು ನೈರುತ್ಯದಿಕ್ಕಿನ ಮನೆಗಳ ವರ್ಣಸ್ವರೂಪ. ಪಂಚನಾದ,ಈಶ್ವರಾಷ್ಟಕ,ರುದ್ರರೇಕಾದಶ,ನಿಜಾತ್ಮತತ್ವ ಈ ಇಪ್ಪತ್ತೈದು ನೈರುತ್ಯದಿಕ್ಕಿನಮನೆಗಳವರ್ಣಸ್ವರೂಪವು. ಆತ್ಮತತ್ವವಿಪ್ಪತ್ತೈದು ಈಶಾನ್ಯದಿಕ್ಕಿನ ಮನೆಗಳ ವರ್ಣಸ್ವರೂಪು, ತ್ರಿತತ್ವಸಂಬಂಧವಾದ ಮೂವತ್ತಾರು ತತ್ವಂಗಳು ಮಧ್ಯವೃತ್ತದಹಕಾರವಾದಿಯಾಗಿ ಮೇಲಣ ವೃತ್ತದ ನಕಾರವ ಬಳಿಗೊಂಡು, ಇಂದ್ರದಿಕ್ಕು ಮೊದಲಾದ ನಾಲ್ಕುದಿಕ್ಕಿನ ಮನೆಗಳ ವರ್ಣಸ್ವರೂಪ ವೆಂದರಿವುದು.

ಇನ್ನೊಂದು ಪ್ರಕಾರ:—ಅಗ್ನಿದಿಕ್ಕಿನ ಕೋಷ್ಠಂಗಳಿಪ್ಪತ್ತೈದುವರ್ಣಕ್ಕೆ ವಿವರ. ನಕಾರವೇ ಸತ್ತು, ಮಕಾರವೇ ಚಿತ್ತು, ಶಿಕಾರವೇ ಆನಂದ, ವಕಾರವೇ ನಿತ್ಯ, ಯಕಾರವೇ ಪರಿಪೂರ್ಣ. ಮತ್ತಂ. ವಕಾರವೇ ಲಿಂಗಕ್ಷೇತ್ರಸಂಜ್ಞೆ, ಯಕಾರವೇ ಅನಾದಿಸಂಜ್ಞೆ,ನಕಾರವೇ ಪರಮಸಂಜ್ಞೆ, ಮಕಾರವೇ ಗೂಢಸಂಜ್ಞೆ. ಶಿಕಾರವೇ ಶರೀರಸ್ಥಸಂಜ್ಞೆ. ಮತ್ತಂ. ಮಕಾರವೇ

ಪಿಂಡಬ್ರಹ್ಮ, ಶಿಕಾರವೇ ಕಲಾಬ್ರಹ್ಮ, ವಕಾರವೇ ಆನಂದಬ್ರಹ್ಮ, ಯಕಾರವೇ ವಿಜ್ಞಾನಬ್ರಹ್ಮ, ನಕಾರವೇ ಮೂರ್ತಿಬ್ರಹ್ಮ. ಮತ್ತಂ. ಯಕಾರವೇ ಸದಾಶಿವ, ನಕಾರವೇ ಈಶಾನ್ಯ, ಮಕಾರವೇ ಈಶ್ವರ, ಶಿಕಾರವೇ ಬ್ರಹ್ಮೇಶ, ವಕಾರವೇ ಈಶ. ಮತ್ತಂ ಶಿಕಾರವೇ ಶಿವತತ್ವ, ವಕಾರವೇ ಈಶ್ವರತತ್ವ, ಯಕಾರವೇ ಸದಾಶಿವತತ್ವ, ನಕಾರವೇ ಆತ್ಮತತ್ವ,ಮಕಾರವೇ ವಿದ್ಯಾತತ್ವ

ಇನ್ನು ಯಮದಿಕ್ಕಿನ ಕೋಷ್ಠಂಗಳ ಬೀಜಾಕ್ಷರವೈದಕ್ಕೆ ವಿವರ.ಹ್ರಂ. ಎಂಬುದೇ ನಿರಂಜನ, ಶ್ರಿಂ ಎಂಬುದೇ ಮಹಾಸಂಜ್ಞೆ, ಕ್ಷುಂ ಎಂಬುದೇ ಪರಬ್ರಹ್ಮ, ಸೌಂ ಎಂಬುದೇ ಶಿವಮೂರ್ತಿ,ಕ್ಷೆಂ ಎಂಬುದೇ ಪರತತ್ವ.

ಇನ್ನು ನೈರುತ್ಯದಿಕ್ಕಿನ ಕೋಷ್ಠಂಗಳಿಪ್ಪತ್ತೈದುವರ್ಣಕ್ಕೆ ವಿವರ:— ಯಕಾರವೇ ಪರಶಕ್ತಿ, ವಕಾರವೇ ಆದಿಶಕ್ತಿ, ಶಿಕಾರವೇ ಇಚ್ಛಾಶಕ್ತಿ, ಮಕಾರವೇ ಜ್ಞಾನಶಕ್ತಿ, ನಕಾರವೇ ಕ್ರಿಯಾಶಕ್ತಿ, ಮತ್ತಂ. ಶಿಕಾರವೆ ಮೂರ್ತಿಸದಾಖ್ಯ, ಮಕಾರವೇ ಕರ್ತೃಸದಾಖ್ಯ, ನಕಾರವೇ ಕರ್ಮಸದಾಖ್ಯ, ಯಕಾರವೇ ಶಿವಸದಾಖ್ಯ, ವಕಾರವೇ ಅಮೂರ್ತಿಸದಾಖ್ಯ; ಮತ್ತಂ. ನಕಾರವೇ ನಿವೃತ್ತಿಕಲೆ, ಯಕಾರವೇ ಶಾಂತಾತೀತಕಲೆ, ವಕಾರವೆ, ಶಾಂತಿಕಲೆ, ಶಿಕಾರವೇ ವಿದ್ಯಾಕಲೆ, ಮಕಾರವೇ ಪ್ರತಿಷ್ಠಾಕಲೆ:—ಮತ್ತಂ. ವಕಾರವೇ ತತ್ಪುರುಷಮುಖ. ಶಿಕಾರವೇ ಅಘೋರಮುಖ, ಮಕಾರವೇ ವಾಮದೇವಮುಖ, ನಕಾರವೇ ಸದ್ಯೋಜಾತಮುಖ, ಯಕಾರವೇ ಈಶಾನ್ಯಮುಖ; ಮತ್ತಂ. ಮಕಾರವೇ ಅಪ್ಪು, ನಕಾರವೇ ಪೃಥ್ವಿ, ಯಕಾರವೇ ಆಕಾಶ, ವಕಾರವೆ ವಾಯು, ಶಿಕಾರವೇ ಅಗ್ನಿ.

ಇನ್ನು ವರುಣದಿಕ್ಕಿನ ಕೋಷ್ಠಂಗಳ ಬೀಜಾಕ್ಷರವೈದಕ್ಕೆ ವಿವರ:— ಕ್ಲಿಂ ಎಂಬುದೆ ಚಿಚ್ಛಕ್ತಿ, ಸೌಂ ಎಂಬುದೇ ಮಹಾಸದಾಖ್ಯ, ಓಂ ಎಂಬುದೆ ಶಾಂತಾತೀತೋತ್ತರಕಲೆ, ಹ್ರಂ ಎಂಬುದೇ ಗೋಪ್ಯಮುಖ, ಕ್ಷುಂ ಎಂಬುದೆ ಆತ್ಮ..

ಇನ್ನು ವಾಯವ್ಯದಿಕ್ಕಿನ ಕೋಷ್ಠಂಗಳಿಪ್ಪತ್ತೈದು ವರ್ಣಕ್ಕೆ ವಿವರ:— ನಕಾರವೇ ಅಸ್ಥಿ, ವಕಾರವೇನಾಡಿ, ಯಕಾರವೇ ರೋಮ, ಮಕಾರವೇ ಮಾಂಸ, ಶಿಕಾರವೇತ್ವಕ್ಕು. ಮತ್ತಂ. ಮಕಾರವೇ ರುಧಿರ, ಯಕಾರವೇ

ಶ್ಲೇಷ್ಮ, ಶಿಕಾರವೇ ಶುಕ್ಲ,ನಕಾರವೆ ರಸ, ವಕಾರವೇ ಪಿತ್ತ. ಮತ್ತಂ. ಶಿಕಾರವೇ ನಿದ್ರೆ,ನಕಾರವೇ ಕ್ಷುಧೆ,ವಕಾರವೇ ಆಲಸ್ಯ,ಮಕಾರವೇ ತೃಷ್ಣೆ ಯಕಾರವೇ ಸಂಗ. ಮತ್ತಂ. ವಕಾರವೇ ಯೋಗ, ಮಕಾರವೇ ವಲನ, ಯಕಾರವೇ ವಿಂಯೋಗ, ಶಿಕಾರವೇ ಕುಂಚನ, ನಕಾರವೇ ಧಾವನ. ಮತ್ತಂ. ಯಕಾರವೇ ಮೋಹ, ಶಿಕಾರವೇ ಭೆಯ, ನಕಾರವೇ ರಾಗ, ವಕಾರವೇ ಲಜ್ಜೆ, ಮಕಾರವೆ ದ್ವೇಷ.

ಇನ್ನು ಕುಬೇರದಿಕ್ಕಿನ ಕೋಷ್ಟಂಗಳ ಬೀಜಾಕ್ಷರವೈದಕ್ಕೆ ವಿವರ. ಓಂ ಎಂಬುದೇ ಕಠಿಣ, ಹ್ರಿಂ ಎಂಬುದೆ ಮೃದು, ಕ್ಷುಂ ಎಂಬುದೆ ಉಷ್ಣ ಕ್ಲಿಂ ಎಂಬುದೇ ಜಲನೆ, ಸೌಂ ಎಂಬುದೇ ಶೂನ್ಯ.

ಇನ್ನು ಈಶಾನ್ಯದಿಕ್ಕಿನ ಕೊಟ್ಟಂಗಳಿಪ್ಪತ್ತೈದು ವರ್ಣಕ್ಕೆ ವಿವರ. ಶಿಕಾರವೇ ಪಾದ, ಯಕಾರವೇ ವಾಕ್ಕು, ಮಕಾರವೇ ಗುಹ್ಯ, ವಕಾರವೇ ಪಾಣಿ, ನಕಾರವೆ ಪಾಯು.ಮತ್ತಂ. ವಕಾರವೇ ಸ್ಪರ್ಶನ, ನಕಾರವೇ ಗಂಧ, ಶಿಕಾರವೇ ರೂಪು,ಯಕಾರವೇ ಶಬ್ದ, ಮಕಾರವೇ ರಸ.ಮತ್ತಂ ಯಕಾರವೇ ಶ್ರೋತ್ರ, ಮಕಾರವೇ ಜಿಹ್ವೆ, ವಕಾರವೇ ತ್ವಕ್ಕು, ನಕಾರವೇ ನಾಸಿಕ, ಶಿಕಾರವೇ ನೇತ್ರ. ಮತ್ತಂ. ನಕಾರವೆ ಪ್ರಾಣ, ಶಿಕಾರವೆ! ವ್ಯಾನ, ಯಕಾರವೇ ಸಮಾನ, ಮಕಾರವೇ ಅಪಾನ, ವಕಾರವೇ ಉದಾನ. ಮತ್ತಂ. ಮಕಾರವೇ ಬುದ್ಧಿ ವಕಾರವೇ ಮನ, ನಕಾರವೇ ಚಿತ್ತು ಉಕಾರವೇ ಅಹಂಕಾರ,ಯಕಾರವೇ ಜ್ಞಾನ.

ಇನ್ನು ಇಂದ್ರದಿಕ್ಕಿನ ಮನೆಗಳ ಬೀಜಾಕ್ಷರವೈದಕ್ಕೆ ವಿವರ:—ಕ್ಷುಂ ಎಂಬುದೇ ಮನನ, ಕ್ಲಿಂ ಎಂಬುದೇ ತೃಪ್ತಿ, ಸೌಂ ಎಂಬುದೇ ಹೃದಯ, ಶ್ರಿಂ ಎಂಬುದೇ ಚೇತನ, ಹ್ರಿಂ ಎಂಬುದೆ ಭಾವ.

ಇನ್ನು ಎರಡನೆಯ ವೃತ್ತದ ಹದಿನೈದುವರ್ಣಂಗಳಿಗೆ ವಿವರ.

ನಕಾರವೇ ಋಗ್ವೇದ, ಮಕಾರವೇ ಯಜುರ್ವೇದ, ಶಿಕಾರವೇ ಸಾಮವೇದ, ವಕಾರವೆ ಅಥರ್ವಣವೇದ, ಯಕಾರವೇ ಗಾಯಿತ್ರಿ. ಅಲ್ಲಿಂದ ಮುಂದೆ, ಯಕಾರವೇ ಮಹಾದೇವ, ವಕಾರವೇ ಭೀಮ, ಶಿಕಾರವೇ ಹರ, ಮಕಾ

ರವೇ ಮೃಡ, ನಕಾರವೇ ಭವ. ಅಲ್ಲಿಂದ ಮುಂದೆ, ಕ್ಷಿಕಾರವೆ ಕೆಂಪುವರ್ಣ, ದಕಾರವೇ ಹಸುರುವರ್ಣ, ಯಕಾರವೇ ಕೃಷ್ಣವರ್ಣ, ನಕಾರವೇ ಪೀತ ವರ್ಣ, ಮಕಾರವೇ ಶ್ವೇತವರ್ಣ.

ಇನ್ನು ಮಧ್ಯವೃತ್ತದ ವರ್ಣಕ್ಕೆ ವಿವರ:—ಹಕಾರವೇ ಸಮಸ್ತವೇದ ಉಪಮಾತೀತ ಮಾಣಿಕ್ಯವರ್ಣ ಸ್ವರೂಪವೆಂದರಿದು ಸಂಬಧಿಸುವುದು. ಮತ್ತಮೀಯಂತ್ರವೇ ಮಹದಾಕಾಶಮಯವಪ್ಪ ಕಂಥೆ; ವೃತ್ತದ್ವಯವೇ ಪ್ರಕೃತಿ ಪುರುಷರೂಪಮಪ್ಪ ಕಂತ. ಪಾಲುರೇಖೆಗಳೆ ಗುಣತ್ರಯಂಗಳಿಂ ಮುಪ್ಪುರಿಗೂಡಿದಾಧಾರಂಗಳು, ತ್ರಿಶೂಲಂಗಳೆ ಆಹವನೀಯ, ಗಾರ್ಹಪತ್ಯ ದಕ್ಷಿಣಾಗ್ನಿಸ್ವರೂಪವಾದ ಆಯುಧ ಸೂತ್ರಂಗಳು, ಶ್ರೀಕಾರಂಗಳೇ ಅಷ್ಟ ಮಹದೈಶ್ವರ್ಯ ಸ್ವರೂಪವಾದ ಅಲಂಕಾರಗಳು, ಅಕ್ಷರನ್ಯಾಸಂಗಳೇ ಸಕಲ ತತ್ವರೂಪವಾದ ಸೂತ್ರಕೋಶಂಗಳು; ಇಂತಿದು ಪ್ರವೃತ್ತಿಮಾರ್ಗವನುಳ್ಳ ಪಂಚಪ್ರಣವಸಂಬಂಧವೆಂದರಿವುದು, ಆ ಬಿಂದು ನಾದ ಕಲೆ ಶಕ್ತಿ ಶಿವ ಸ್ವ ರೂಪವಾದ, ಅ ಉ ಮ ಬ ಹ ಎಂಬಪಂಚಪ್ರಣವಂಗಳು ಪರಿವಿಡಿಯಿಂ ಜಾಗ್ರದಾದಿಪಂಚಾವಸ್ಥೆಗಳಲ್ಲಿ ಸಂಬಧವಾದ ನಿವೃತ್ತಿಮಾರ್ಗವಿಂತಾದೊಡೆ.

ಇನ್ನು ಮಂತ್ರಸಂಬಂಧ.

ಮೂಲ ಪಂಚಾಕ್ಷರವಾರು, ಸ್ಥೂಲಪಂಚಾಕ್ಷರವೊಂಭತ್ತು, ಸೂಕ್ಷ್ಮ ಪಂಚಾಕ್ಷರವೈದು, ಮಾಯಾಖ್ಯ ಪಂಚಾಕ್ಷರವೆಂಟು, ಪ್ರಸಾದ ಪಂಚಾಕ್ಷರ ಹತ್ತು,ನಿರಂಜನ ಶೂನ್ಯ ನಿಷ್ಕಲ ಮೂಲಪ್ರಣವವೆಂಬಿವು ನಾಲ್ಕು, ಷಡಕ್ಷರ ಮಂತ್ರವಾರು, ಷಡಕ್ಷರರೂಪವಾದ ಅಕಾರಾದಿ ಬೀಜಾಕ್ಷರ ಮಂತ್ರ ವೈವತ್ತೆರಡು, ಇಂತೀ ಶತಮಂತ್ರಾಕ್ಷರಂಗಳು ಅಗ್ನಿದಿಕ್ಕು ಮೊದಲಾದ ನಾಲ್ಕು ದಿಕ್ಕಿನ ಮನೆಗಳ ವರ್ಣಸ್ವರೂಪವು.ಬ ಸ ವ ಅ ಉ ಮ ಎಂಬ ಬೀಜಾಕ್ಷರಮಂತ್ರವಾರು, ಹ್ರಂ ಹ್ರಿಂ ಹ್ರುಂ ಹ್ರೈಂ ಹ್ರೌಂ ಹ್ರಃ ಎಂಬ ಕೀಲಕಮಂತ್ರವಾರು, ಓಂ ಹ್ರಾಂ ಹೃದಯಾಯ ನಮಃ, ಓಂ ಹ್ರಿಂ ಶಿರಸೇ ಸ್ವಾಹಾ,ಓಂ,ಹ್ರುಂ ಶಿವಾಯ ವೌಷಟು,ಓಂ ಹ್ರೈಂ ಕವಚಾಯ ಭಂ,ಓಂ ಹ್ರೌಂ ನೇತ್ರತ್ರಯಾಯ ವೌಷಟು, ಓಂ ಹ್ರಃ ಅಸ್ತ್ರಾಯ ಫ

ಟು,ಎಂಬ ನ್ಯಾಸಾಕ್ಷರ ಮಂತ್ರವಾರು,ಓಂ ಹ್ರಂ ನಾಂ ಸ್ಯೋಜಾತಾಯದೆ ನಮಃ,ಓಂ ಹ್ರಿಂ ಮಾಂ ವಾಮದೇವಾಯ ನಮಃ,ಓಂ ಹ್ರುಂ ಶಿಂ ಅಘೋರಾಯ ನಮಃ, ಓಂ ಹ್ರೈಂ ವಾಂ ತತ್ಪುರುಷಾಯ ನಮಃ, ಓಂ ಹ್ರೌಂ ಯಾಂ ಈಶಾನ್ಯಾಯ ನಮಃ,ಓಂ ಹ್ರಃ ಓಂ ಹೃದಯಾಯ ನಮಃ,ಎಂಬ ವದನಾಕ್ಷರ ಮಂತ್ರವಾರು. ಓಂ ಹ್ರಂ ನಾಂ. ಸರ್ವಜ್ಞ ಸರ್ವಶಕ್ತಿಧಾಮ್ನೇ ನಮಃ, ಓಂ ಹ್ರಿಂ ಮಾಂ ತೃಪ್ತಿ ಶಕ್ತಿಧಾಮ್ನೇ ನಮಃ, ಓಂ ಹ್ರುಂ ಶಿಂ ಅನಾದಿಶಕ್ತಿಧಾಮ್ನೇ ನಮಃ, ಓಂ ಹ್ರೈಂ ವಾಂ ಸ್ವತಂತ್ರಶಕ್ತಿಧಾಮ್ನೇ ನಮಃ. ಓಂ ಹ್ರೌಂ ಯಾಂ ನಿತ್ಯ ಶಕ್ತಿಧಾಮ್ನೇನಮಃ, ಓಂ ಹ್ರಃ ಓಂ ಅಲುಪ್ತ ಶಕ್ತಿಧಾಮ್ನೇನಮಃ,ಎಂಬ ಶಕ್ತಿ ಷಡಂಗಮಂತ್ರ ವಾರು.ಓಂ ಹ್ರಂ ನಾಂ ಆಚಾರಲಿಂಗಾಯ ನಮಃ, ಓಂ ಹ್ರಿಂ ಮಾಂ ಗುರುಲಿಂಗಾಯ ನಮಃ ಓಂ ಹ್ರುಂ ಶಿಂ ಶಿವಲಿಂಗಾಯ ನಮಃ,ಓಂ ಹ್ರೈಂ ವಾಂ ಜಂಗಮಲಿಂಗಾಯ ನಮಃ, ಓಂ ಹ್ರೌಂ ಯಾಂ ಪ್ರಸಾದಲಿಂಗಾಯ ನಮಃ, ಓಂ ಹ್ರಃ ಓಂ ಮಹಾಲಿಂಗಾಯನಮಃ, ಎಂಬ ಲಿಂಗಷಡಕ್ಷರ ಮಂತ್ರವಾರು, ಇಂತೀ ಷಟ್ತ್ರಿಂಶನ್ಮಂತ್ರಂಗಳು ಮಧ್ಯ ವೃತ್ತದ ಹಕಾರವಾದಿಯಾಗಿ, ಮೇಲಣ ವೃತ್ತದ ನಕಾರವ ಬಳಿಗೊಂಡು, ಇಂದ್ರದಿಕ್ಕು ಮೊದಲಾದ ನಾಲ್ಕು ದಿಕ್ಕಿನ ಮನೆಗಳ ವರ್ಣ ಸ್ವರೂಪು; ಜ್ಞಾನ ಶೂನ್ಯ ಸ್ಥಲ ನಿಷ್ಪ್ರತಿಸ್ಥಾನವಾದುದರಿಂದದದನುಳುಹಿ, ಉಳಿದ ಪಿಂಡಾದಿಶತಸ್ಥಲಂಗಳು, ಇಂದ್ರದಿಕ್ಕು ಮೊದಲಾದ ನಾಲ್ಕುದಿಕ್ಕಿನ ಮನೆಗಳ ವರ್ಣಸ್ವರೂಪು, ತ್ರಿವಿಧ ತ್ರಿವಿಧ ಮಿಶ್ರಷಡ್ವಿಧ ಅಂಗ ಲಿಂಗಸ್ಥಲಂಗಳು ಮೂವತ್ತಾರನು ಪೂರ್ವೋಕ್ತಕ್ರಮದಂತೆ ಅರಿವುದು.

ಇನ್ನೊಂದು ಪ್ರಕಾರ:—ಭಕ್ತನ ಯೋಗಾಂಗ ವೈದನು, ಮಹೇಶ್ವರನ ಯೋಗಾಂಗವೈದನು, ಪ್ರಸಾದ ಯೋಗಾಂಗ ವೈದನು, ಪ್ರಾಣಲಿಂಗ ಯೋಗಾಂಗವೈದನು, ಶರಣನ ಯೋಗಾಂಗವೈದನು, ಅಗ್ನಿದಿಕ್ಕಿನ ಮನೆಗಳ ವರ್ಣಂಗಳಲ್ಲಿ, ಇವರಲ್ಲಿ ಉಳಿದುವೈದನು ಯಮದಿಕ್ಕಿನ ಮನೆಗಳ ವರ್ಣಂಗಳಲ್ಲಿ; ಆಚಾರಲಿಂಗ ಮಿಶ್ರವೈದನು, ಗುರುಲಿಂಗ ಮಿಶ್ರವೈದನು, ಶಿವಲಿಂಗ ಮಿಶ್ರವೈದನು, ಜಂಗಮಲಿಂಗ ಮಿಶ್ರವೈದನು, ಪ್ರಸಾದಲಿಂಗಮಿಶ್ರವೈದ

ನು. ನೈರುತ್ಯದಿಕ್ಕಿನ ಮನೆಗಳ ವರ್ಣಂಗಳಲ್ಲಿ, !ಇವರಲ್ಲಿ ಉಳಿದುವೈದನು, ವರುಣದಿಕ್ಕಿನ ಮನೆಗಳ ವರ್ಣಂಗಳಲ್ಲಿ; ಶ್ರದ್ಧಾಭಕ್ತಿ ಮಿಶ್ರವೈದನು, ನೈಷ್ಠಿಕಾಭಕ್ತಿಮಿಶ್ರವೈದನು, ಸಾವಧಾನ ಭಕ್ತಿಮಿಶ್ರವೈದನು, ಅನುಭಾವಭಕ್ತಿ ಮಿಶ್ರವೈದನು, ಆನಂದಭಕ್ತಿ ಮಿಶ್ರವೈದನು, ವಾಯವ್ಯದಿಕ್ಕಿನ ಮನೆಗಳ ವರ್ಣಂಗಳಲ್ಲಿ, ಇವರಲ್ಲಿ ಉಳಿದುವೈದನು, ಕುಬೇರದಿಕ್ಕಿನ ಮನೆಗಳ ವರ್ಣಂಗಳಲ್ಲಿ; ಗಂಧಪ್ರಸಾದಮಿಶ್ರವೈದನು, ರಸಪ್ರಸಾದ ಮಿಶ್ರವೈದನು, ರೂಪಪ್ರಸಾದ ಮಿಶ್ರವೈದನು, ಸ್ಪರ್ಶನ ಪ್ರಸಾದ ಮಿಶ್ರವೈದನು, ಶಬ್ದಪ್ರಸಾದ ಮಿಶ್ರವೈದನು, ಈಶಾನ್ಯದಿಕ್ಕಿನ ಮನೆಗಳ ವರ್ಣಂಗಳಲ್ಲಿ, ಇವರಲ್ಲಿ ಉಳಿದುವೈದನು, ಪೂರ್ವದಿಕ್ಕಿನ ಮನೆಗಳ ವರ್ಣಂಗಳಲ್ಲಿ, ಐಕ್ಯನ ಯೋಗಾಂಗವೈದನು, ಮಹಾಲಿಂಗ ಮಿಶ್ರವೈದನು, ಸಮರಸಭಕ್ತಿಮಿಶ್ರವೈದನು, ಮೇಲಣ ವೃತ್ತದ ವರ್ಣಂಗಳಲ್ಲಿ, ಇವರಲ್ಲಿ ಉಳಿದ ಮೂರನು, ತೃಪ್ತಿಪ್ರಸಾದ ಮಿಶ್ರವೈದನು, ಮಧ್ಯವೃತ್ತದ ವರ್ಣಂಗಳಲ್ಲಿ ಪೂರ್ವೋಕ್ತಕ್ರಮದಂತೆ ವರ್ಣಪಲ್ಲಟ ಸ್ಥಲಪಲ್ಲಟವನರಿದು ಸಂಬಂಧಿಸುವುದು, ಇನ್ನುಳಿದ ಸಕೀಲಂಗಳನು ಇವರಲ್ಲಿ ತಿಳಿಯುವುದು.

ಮತ್ತಂ. ಯಂತ್ರವೇ ಚಿದಂಬರವೆಂಬ ಕಂಥೆ, ವೃತ್ತದ್ವಯಂಗಳೆ ಜ್ಞಾನ ಕ್ರಿಯಾರೂಪವಾದ ಕಂತ, ಪಾಲುರೇಖೆಗಳೆ ಭಕ್ತಿ ಜ್ಞಾನ ವೈರಾಗ್ಯ ಮುಪ್ಪುರಿಗೂಡಿದಾಧಾರಂಗಳು, ತ್ರಿಶೂಲಂಗಳೇ, ಜ್ಞಾತೃ ಜ್ಞಾನ.ಜ್ಞೇಯ.ಧ್ಯಾನ ಧಾರಣ ಸಮಾಧಿ, ತತ್ವಜ್ಞಾನಾನುಭವ, ಶಿವಮಂತ್ರ ಸ್ಮರಣೆ, ವಸ್ತುಲಕ್ಷಾನುಸಂಧಾನ, ಕ್ಷಮೆ ಧೃತಿ, ವಿರಾಗವೆಂಬಾಯಧಸೂತ್ರಂಗಳು; ಶ್ರೀಕಾರಂಗಳೇ ಆರಾರು ತೆರನಾದ ಮಿಶ್ರಾಷ್ಟಾವರಣ, ನಾಲ್ವತ್ತೆಂಟು ವಿಧವಾಗಿರ್ಪುವು. ಅಂತಲ್ಲದೆ ನಾಲ್ವತ್ತೆಂಟು ತೆರವಾದ ಅಷ್ಟವಿಧ ಸಕೀಲಂಗಳಾದೊಡಾಗಲಿ. ಇಂತಿವು ಅಲಂಕಾರಂಗಳು; ಅಕ್ಷರನ್ಯಾಸವೇ ಸರ್ವಾಚಾರ ಸ್ವರೂಪವಾದ ಸೂತ್ರಕೋಶಂಗಳೆಂದರಿವುದು.

ಇನ್ನು ಸೃಷ್ಟಿಕ್ರಮ.

ಹಕಾರವೇ ಸಾಕ್ಷಾತ್ಪರಶಿವನು, ಆ ಪರಶಿವನಿಂದಾದುದೇ ಓಂಕಾರ, ಆ ಓಂಕಾರವೇ ಪರಮಾತ್ಮ, ಆ ಪರಮಾತ್ಮನಿಂ ನಾದ, ಆ ನಾದದಿಂ ಬಿಂದು,-

ಆ ಬಿಂದುವಿನಿಂ ಕಲೆ,ಆ ಕಲೆಯಿಂ ಶಕ್ತಿ,ಆ ಶಕ್ತಿಯಿಂ ಸತ್ತು, ಆ ಸತ್ತುವಿಂ ಚಿತ್ತು, ಆ ಚಿತ್ತುವಿಂ, ಪರಮತೇಜೋರಾಶಿಯೆನಿಪ ಶಿವತತ್ವ, ಆ ಶಿವತತ್ವ ಡಿಂ ಸದಾಶಿವ, ಆ ಸದಾಶಿವನಿಂ ಈಶ್ವರ, ಆ ಈಶ್ವರನಿಂ ರುದ್ರ, ಆ ರುದ್ರ ನಿಂ ವಿಷ್ಣು, ಆ ವಿಷ್ಣುವಿನಿಂ ಬ್ರಹ್ಮ, ಅಬ್ರಹ್ಮನಿಂ ಜಗತ್ಸಚರಾಚರವಾ ಯಿತೆಂದರಿವುದು. ಚಿದಂಬರೋದ್ಧರಣೆಯ ಸಂಬಂಧ ಸಮಾಪ್ತ ಮಂಗಳ ಮಹಾ.

---

ಗುರುಭ್ಯೋ ನಮಃ.

## ಷ ಡ್ಬ್ರ ಹ್ಮೋ ದ್ಧ ರ ಣೆ.

ಇಂತು ಸರ್ವಮಂತ್ರಧಾರಣವಾಗಿ, ಸಕಲತತ್ವಂಗಳ ಗರ್ಭೀಕರಿಸಿ. ಕೊಂಡಿರ್ಪ, ಚಿದಂಬರಡಿಂದುದಯಿಸಿದ ಶಿವಶಕ್ತಿಸಂಪುಟವಾದುದೆ ಘನ ಕೆ ಘನವಾದ ಪರಬ್ರಹ್ಮ, ಆ ಪರಬ್ರಹ್ಮವೇ ಷಡ್ವಿಧವಾಗಿರ್ಪುದದನುದ್ಧರಿ ಸುವ ಕ್ರಮವೆಂತೆಂದೊಡೆ:—ಮೇಲಣಿಂ ಕೆಳಗೆ, ನೀಳ ರೇಖೆಗಳೇಳನು ಬಳಿಕವರಲ್ಲಿ, ಅಡ್ಡರೇಖೆಗಳೇಳನು ತೆಗೆಯಲು, ಮೂವತ್ತಾರು ಮನೆಗಳಾದು ವು. ಆ ನೀಳರೇಖೆಗಳೇಳನುನ್ನತಂಮಾಡಿ ಮೇಲಡ್ಡರೇಖೆಯಂ ತೆಗೆಯೆ,ಷಡ್ವಿ ದ ಭವನಂಗಳಾದುವವರಲ್ಲಿ, ಮೊದಲು ಮನೆಯ ಪರಿವಿಡಿಯಿಂ, ಪರಬ್ರಹ್ಮ, ವಿಜ್ಞಾನಬ್ರಹ್ಮ ಆನಂದಬ್ರಹ್ಮ, ಕಲಾಬ್ರಹ್ಮ, ಪಿಂಡಬ್ರಹ್ಮ, ಮೂ ರ್ತಿಬ್ರಹ್ಮ, ಎಂಬ ಷಡ್ವಿದ ಬ್ರಹ್ಮವನು. ಬಳಿಕ ದಕ್ಷಿಣಭಾಗದ ಅಡ್ಡ ರೇಖೆಗಳೇಳನುನ್ನತಂಮಾಡಿ ನೀಳವೆರಡು ರೇಖೆಗಳಂ ತೆಗೆಯೆ, ಹನ್ನೆರಡು ಮನೆಗಳಾದುವವರಲ್ಲಿ, ಕಡೆಯ ಮೇಲಣ ಮನೆಯ ತರಂಗೊಂಡು ಆರರ ಲ್ಲಿ ಚಿಛ್ಛಕ್ತಿ, ಪರಶಕ್ತಿ, ಆದಿಶಕ್ತಿ, ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶ ಕ್ತಿ, ಎಂಬ ಷಡ್ವಿಥ ಶಕ್ತಿಗಳಂ, ಅದರೀಚೆಗೆ ಮೇಲಣ ಮನೆಯ ಬಳಿವಿಡಿದಾ ರರಲ್ಲಿ, ಶಿವಾಂಗ, ಭೂತಾಂಗ, ಯೋಗಾಂಗ, ಕಾಮಾಂಗ, ವಿದ್ಯಾಂಗ, ಕರ್ಮಾಂಗ, ಎಂಬ ಷಡ್ವಿಥಾಂಗಮಂ, ಮತ್ತಂ ಮೂವತ್ತಾರು ಮನೆಗಳೊ ಳಗೆ, ಉತ್ತರಭಾಗದ ಮೊದಲ ಮನೆಯ ಮೇಲಣಿಂ ಕೆಳಗೆ, ಆರರಲ್ಲಿ, ಶಿವ, ಕ್ಷೇತ್ರಜ್ಞ,ಕರ್ತಾರ, ಭಾವ, ಚೈತನ್ಯ, ಅಂತರ್ಯಾಮಿಯೆಂಬ ಷಡ್ವಿಥಮೂ

ರ್ತಿಗಳಂ, ಬಳಿಕೀ ಪ್ರಕಾರದಿಂ ಎರಡನೆಯ ಪಙ್ತಿಯ ಮನೆಗಳಲ್ಲಿ, ಸದಾಶಿವ, ಆಕಾಶ, ಶಬ್ದ, ಜ್ಞಾನ, ಶ್ರೋತ್ರ, ವಾಕ್ಕು, ಎಂಬ ಷಟ್ತತ್ತ್ವಂಗಳಂ, ಮೂರನೆಯ ಪಙ್ತಿಯ ಮನೆಗಳಲ್ಲಿ, ಈಶ್ವರ, ವಾಯು, ಸ್ಪರ್ಶನ, ಮನ, ತ್ವಕ್ಕು, ಪಾಣಿ, ಎಂಬ ಷಟ್ತತ್ತ್ವಂಗಳಂ, ನಾಲ್ಕನೆಯ ಪಙ್ತಿಯ ಮನೆಗಳಲ್ಲಿ ರುದ್ರ, ಅಗ್ನಿ, ರೂಪ, ಬುದ್ಧಿ, ಚಕ್ಷು, ಪಾದಯೆಂಬ, ಷಟ್ತತ್ತ್ವಂಗಳಂ, ಐದನೆಯ ಪಙ್ತಿಯ ಮನೆಗಳಲ್ಲಿ, ವಿಷ್ಣು, ಅಪ್ಪು, ರಸ, ಚಿತ್ತ, ಜಿಹ್ವೆ ಗುಹ್ಯವೆಂಬ ಷಟ್ತತ್ವಂಗಳಂ, ಆರನೆಯ ಮನೆಗಳಲ್ಲಿ ಬ್ರಹ್ಮ, ಪೃಥ್ವಿ, ಗಂಧ, ಅಹಂಕಾರ, ಘ್ರಾಣ, ಪಾಯು ಎಂಬ ಷಟ್ತತ್ವಂಗಳಂ ಬರೆಯಲು ಯಂತ್ರ ಲಕ್ಷಣತತ್ವನ್ಯಾಸಮುಗಿಯಿತು. ಇಂತಿವರ ಪ್ರವೃತ್ತಿಮಾರ್ಗವೆಂತೆಂದೊಡೆ:- ಷಡ್ವಿಧ ಬ್ರಹ್ಮ, ವಂದೊಂದಾರಾರಾಗಿ, ಷಟ್ತ್ರಿಂಶತ್ತತ್ವವಾದುವವಕ್ಕೆ ವಿವರ:—ಪರಬ್ರಹ್ಮದಿಂ, ಶಿವ, ಕ್ಷೇತ್ರಜ್ಞ, ಕರ್ತಾರ: ಭಾವ, ಚೈತನ್ಯ, ಅಂತರ್ಯಾಮಿಯೆಂಬ, ಷಟ್ತತ್ವಂಗಳಾದುವು, ವಿಜ್ಞಾನಬ್ರಹ್ಮದಿಂ ಸದಾಶಿವ, ಆಕಾಶ, ಶಬ್ದ, ಜ್ಞಾನ, ಶ್ರೋತ್ರ, ವಾಕ್ಕು, ಎಂಬ ಷಟ್ತತ್ವಂಗಳಾದುವು. ಆನಂದ ಬ್ರಹ್ಮದಿಂ, ಈಶ್ವರ, ವಾಯು, ಸ್ಪರ್ಶನ, ಮನ, ತ್ವಕ್ಕು, ಪಾಣಿಯೆಂಬ ಷಟ್ತತ್ವಂಗಳಾದುವು. ಕಲಾಬ್ರಹ್ಮದಿಂ, ರುದ್ರ, ತೇಜ, ರೂಪು, ಬುದ್ಧಿ, ನೇತ್ರ, ಪಾದ, ಎಂಬ ಷಟ್ತತ್ವಂಗಳಾದುವು. ಪಿಂಡಬ್ರಹ್ಮದಿಂ, ವಿಷ್ಣು, ಅಪ್ಪು, ರಸ, ಚಿತ್ತ, ಜಿಹ್ವೆ ಗುಹ್ಯವೆಂಬ ಷಟ್ತತ್ವಂಗಳಾದುವು. ಮೂರ್ತಿಬ್ರಹ್ಮದಿಂ ಬ್ರಹ್ಮ, ಪೃಥ್ವಿ,ಗಂಧ, ಅಹಂಕಾರ, ಘ್ರಾಣ, ಪಾಯುವೆಂಬ ಷಟ್ತತ್ವಂಗಳಾದುವು. ಇಂತೀ ಬ್ರಹ್ಮವರ್ಗಮಂ ನಿರೂಪಿಸಿದ ತದನಂತರದಲ್ಲಿ, ಶಕ್ತಿವರ್ಗಮಂ ನಿರೂಪಿಸಲ್ಪಡುತ್ತಿರ್ಕುದು. ಪರಮಜ್ಞಾನ ಶಕ್ತಿಯಿಂ, ಚಿದಾದಿ ಷಡ್ವಿಧ ಶಕ್ತಿಗಳುದಯವಾಗಿ, ಶಿವಾಂಗ, ಭೂತಾಂಗ, ಯೋಗಾಂಗ, ಕಾಮಾಂಗ, ವಿದ್ಯಾಂಗ, ಕರ್ಮಾಂಗ, ಎಂಬ ಷಡಂಗಸ್ವರೂಪವಾಗಿ, ಷಟ್ತ್ರಿಂಶ ತ್ತತ್ವಂಗಳಿಗೆ ಕಾರಣವಾಗಿರ್ಪುವವಕ್ಕೆ ವಿವರ. ಬ್ರಹ್ಮ, ವಿಷ್ಣು, ರುದ್ರ,ಶಿವ,ಈಶ್ವರ, ಸದಾಶಿವನೆಂಬಾರಕ್ಕೆ, ಶಿವಾಂಗ ಸ್ವರೂಪವಾದ ಚಿಚ್ಛಕ್ತಿಯೇ ಕಾರಣವು. ಭೂಮಿ, ಜಲ, ಅಗ್ನಿ, ಮಾರುತ, ಆಕಾಶ, ಕ್ಷೇತ್ರಜ್ಞ, ಎಂಬಾರಕ್ಕೆ, ಭೂತಾಂಗಸ್ವರೂಪವಾದ ಪರಶಕ್ತಿಯೇ ಕಾರಣವು.

ಗಂಧ, ರಸ, ರೂಪು, ಸ್ಪರ್ಶ, ಶಬ್ದ, ಕರ್ತಾರ, ಯೆಂಬಾರಕ್ಕೆ, ಯೋಗಾಂಗ ಸ್ವರೂಪವಾದ ಆದಿಶಕ್ತಿಯೇ ಕಾರಣವು. ಚಿತ್ತ, ಬುದ್ಧಿ, ಅಹಂಕಾರ, ಮನ, ಜ್ಞಾತೃ, ಭಾವ, ಯೆಂಬಾರಕ್ಕೆ ಕರ್ಮಾಂಗಸ್ವರೂಪವಾದ, ಇಚ್ಛಾ ಶಕ್ತಿಯೇ ಕಾರಣವು. ಘ್ರಾಣ, ಜಿಹ್ವೆ, ನೇತ್ರ, ತ್ವಕ್ಕು, ಶ್ರೋತ್ರ, ಚೈತನ್ಯ, ವೆಂಬಾರಕ್ಕೆ, ವಿದ್ಯಾಂಗಸ್ವರೂಪವಾದ ಜ್ಞಾನಶಕ್ತಿಯೇ ಕಾರಣವು. ಪಾಯು ಗುಹ್ಯ, ಪಾದ, ಪಾಣಿ, ವಾಕ್ಕು, ಅಂತರ್ಯಾಮಿ ಯೆಂಬಾರಕ್ಕೆ, ಕರ್ಮಾಂಗಸ್ವರೂಪವಾದ ಕ್ರಿಯಾಶಕ್ತಿಯೇ ಕಾರಣವು. ಇಂತಿವರ ನಿವೃತ್ತಿ ಮಾರ್ಗವೆಂತೆಂಮೊಡೆ:— ಚಿದಾದಿ ಕರ್ಮಪರ್ಯಂತ ಸೃಷ್ಟಿ, ಪರಾದಿ ಮೂರ್ತಿಪರ್ಯಂತಸಂಹಾರವಡಕ್ಕೆ ವಿವರ:—ಶಿವ ಮೊದಲಾದ ಆರು ತತ್ವಂಗಳು ಪರಬ್ರಹ್ಮದಲ್ಲಿ, ಸದಾಶಿವ ಮೊದಲಾದ ಆರುತತ್ವಂಗಳು ವಿಜ್ಞಾನ ಬ್ರಹ್ಮದಲ್ಲಿ, ಈಶ್ವರ ಮೊದಲಾದಾರು ತತ್ವಂಗಳು ಆನಂದಬ್ರಹ್ಮದಲ್ಲಿ, ರುದ್ರ ಮೊದಲಾದಾರು ತತ್ವಂಗಳು ಕಲಾಬ್ರಹ್ಮದಲ್ಲಿ, ವಿಷ್ಣುಮೊದಲಾದಾರು ತತ್ವಂಗಳು ಪಿಂಡಬ್ರಹ್ಮದಲ್ಲಿ, ಬಹ್ಮಮೊದಲಾದಾರು ತತ್ವಂಗಳು ಮೂರ್ತಿಬ್ರಹ್ಮದಲ್ಲಿ ಲೀನವಾಗಲು, ಬ್ರಹ್ಮಮೊದಲಾದ ಷಡ್ವಿಧವೂ ಶಿವಾಂಗ ಸ್ವರೂಪವಾದ ಚಿಚ್ಛಕ್ತಿಯಲ್ಲಿ, ಭೂಮಿ ಮೊದಲಾದ ಷಡ್ವಿಧವೂ ಭೂತಾಂಗಸ್ವರೂಪವಾದ ಪರಶಕ್ತಿಯಲ್ಲಿ, ಗಂಧ ಮೊದಲಾದ ಷಡ್ವಿಧವೂ ಯೋಗಾಂಗಸ್ವರೂಪವಾದ ಆದಿಶಕ್ತಿಯಲ್ಲಿ, ಅಹಂಕಾರ ಮೊದಲಾದ ಷಡ್ವಿಧವೂ ಕಾಮಾಂಗಸ್ವರೂಪವಾದ ಇಚ್ಛಾಶಕ್ತಿಯಲ್ಲಿ, ಘ್ರಾಣ ಮೊದಲಾದ ಷಡ್ವಿಧವೂ ವಿದ್ಯಾಂಗಸ್ವರೂಪವಾದ ಜ್ಞಾನಶಕ್ತಿಯಲ್ಲಿ, ಪಾಯು ಮೊದಲಾದ ಷಡ್ವಿಧವೂ ಕರ್ಮಾಂಗ ಸ್ವರೂಪವಾದ ಕ್ರಿಯಾಶಕ್ತಿಯಲ್ಲಿ ಅಡಗಿದುವು. ಇಂತಾಗಲಾ ಷಡ್ವಿಧಬ್ರಹ್ಮವೂ ತಾವು ಒಂದೊಂದರಲ್ಲಿ ಲೀನವಾಗಿ, ಪರವಸ್ತುವಿನಲ್ಲಿ ವಿಶ್ರಾಂತಿಯಾಗಲಾ ಕ್ರಿಯಾಶಕ್ತಿ ಜ್ಞಾನಶಕ್ತಿಯ ಸಹಸ್ರಾಂಶದಲ್ಲಿ, ಆ ಜ್ಞಾನಶಕ್ತಿಯೆ ಇಚ್ಛಾಶಕ್ತಿಯೆ ಸಹಸ್ರಾಂಶದಲ್ಲಿ, ಆ ಇಚ್ಛಾಶಕ್ತಿಯೆ ಆದಿಶಕ್ತಿಯ ಸಹಸ್ರಾಂಶದಲ್ಲಿ, ಆ ಆದಿಶಕ್ತಿಯೆ ಪರಶಕ್ತಿಯ ಸಹಸ್ರಾಂಶದಲ್ಲಿ, ಆ ಪರಶಕ್ತಿ ಚಿಚ್ಛಕ್ತಿಯ ಸಹಸ್ರಾಂಶದಲ್ಲಿ, ಲೀನವಾಗಿ, ಪರಜ್ಞಾನಶಕ್ತಿಯನೊಡಗೂಡಿ ಪರವಸ್ತುವಿನಲ್ಲಿ ವಿಶ್ರಾಂತಿಯಾಗಲೊಡನೆ,

ಆ ಪರತತ್ವ ನಿತ್ಯ ನಿರಾಳ ನಿಶ್ಚಿಂತ ನಿರ್ಮಾಯನಾಗಿ,ಅದ್ವಿತೀಯ ಸ್ವರೂಪ ವಾಗಿರ್ಪುದು. ಇಂತೀ ತತ್ವನಿರ್ಣಯವನರಿವುದೇ ಬ್ರಹ್ಮಜ್ಞಾನ. ಆ ಜ್ಞಾನ ವೇ ಸತ್ಯಾನಂದಮಯವಾಗಿರ್ಪುಂ. ಷಡ್ಬ್ರಹ್ಮೋದ್ಧರಣೆಯ ಸಂಬಂಧ ಸಮಾಪ್ತ ಮಂಗಳಮಹಾ.

---

ಗುರುಭ್ಯೋ ನಮಃ

## ಪಂಚಮೂರ್ತಿ ಲಿಂಗೋದ್ಧರಣೆ.

ಇಂತೀ ಷಡ್ಬ್ರಹ್ಮೋತ್ಪತ್ತಿ ವಿಶ್ರಾಂತಿ ಸ್ಥಾನಮಪ್ಪ ನಿಷ್ಕಲ ಪರಶಿವನಿಂದಾದ ಪಂಚಮೂರ್ತಿ ಲಿಂಗೋದ್ಧರಣೆಯ ಸಂಬಂಧವೆಂತೆಂದೊಡೆ:— ನಿಷ್ಕಲಶಿವನ ಮಧ್ಯದಲ್ಲಿ ಚಿಚ್ಛಕ್ತಿಯುದಯಿಸಿದಳು. ಆಚಿಚ್ಛಕ್ತಿಯ ಮಧ್ಯದಲ್ಲಿ ಶಾಂತಾತೀತೋತ್ತರೆಯೆಂಬ ಕಲೆ, ಆ ಶಾಂತಾತೀತೋತ್ತರೆಯೆಂಬ ಕಲೆಯ ಮಧ್ಯದಲ್ಲಿ ಮಹಾಲಿಂಗ, ಆ ಮಹಾಲಿಂಗದ ಮಧ್ಯದಲ್ಲಿ ನಿರ್ಮುಕ್ತ ಸದಾಖ್ಯ, ಆ ನಿರ್ಮುಕ್ತ ಸದಾಖ್ಯದ ಮಧ್ಯದಲ್ಲಿ ಪಶುಪತಿಯೆಂಬ ಕಲಾಮೂರ್ತಿ; ಆ ಪಶುಪತಿಯೆಂಬ ಕಲಾಮೂರ್ತಿಯ ಮಧ್ಯದಲ್ಲಿ,ಶಿವನೆಂಬ ಐಕ್ಯ, ಆ ಶಿವನೆಂಬ ಐಕ್ಯನ ಮಧ್ಯದಲ್ಲಿ ಉಪಮಾತೀತನು,ಆ ಉಮಾತೀತನ ಮಧ್ಯದಲ್ಲಿ ಆತ್ಮನು, ಇಂತು ಮಹಾಸದಾಖ್ಯದ ಸೃಷ್ಟಿ. ಆ ನಿಷ್ಕಲ ಶಿವನ ಮಧ್ಯದಲ್ಲಿ ಪರಶಕ್ತಿ, ಆ ಪರಶಕ್ತಿಯ ಮಧ್ಯದಲ್ಲಿ, ಶಾಂತಾತೀತೆಯೆಂಬಕಲೆ, ಆ ಶಾಂತಾತೀತೆಯೆಂಬ ಕಲೆಯಮಧ್ಯದಲ್ಲಿ, ಪ್ರಸಾದಲಿಂಗ, ಆ ಪ್ರಸಾದಲಿಂಗದ ಮಧ್ಯದಲ್ಲಿ ಶಿವಸದಾಖ್ಯ, ಆ ಶಿವಸದಾಖ್ಯದ ಮಧ್ಯದಲ್ಲಿ, ಮಹಾದೇವನೆಂಬ ಕಲಾಮೂರ್ತಿ, ಆ ಮಹಾದೇವನೆಂಬ ಕಲಾಮೂರ್ತಿಯ ಮಧ್ಯದಲ್ಲಿ ಕ್ಷೇತ್ರಜ್ಞನೆಂಬ ಶರಣ, ಆ ಕ್ಷೇತ್ರಜ್ಞನೆಂಬ ಶರಣನ ಮಧ್ಯದಲ್ಲಿ ಸದಾಶಿವನು, ಆ ಸದಾಶಿವನ ಮಧ್ಯದಲ್ಲಿ ಆಕಾಶ ಇಂತು ಶಿವನ ಸದಾಖ್ಯದ ಸೃಷ್ಟಿ. ಆ ನಿಷ್ಕಲಶಿವನಮಧ್ಯದಲ್ಲಿ, ಆದಿಶಕ್ತಿ, ಆ ಆದಿಶಕ್ತಿಯ ಮಧ್ಯದಲ್ಲಿ ಶಾಂತಿಯೆಂಬ ಕಲೆ, ಆ ಶಾಂತಿಯೆಂಬ ಕಲೆಯ ಮಧ್ಯದಲ್ಲಿ ಜಂಗಮಲಿಂಗ, ಆ ಜಂಗಮಲಿಂಗದ ಮಧ್ಯದಲ್ಲಿ ಮೂರ್ತಿಸದಾಖ್ಯ, ಆ ಮೂರ್ತಿಸದಾಖ್ಯದ ಮಧ್ಯದಲ್ಲಿ ಭೀಮೇಶ್ವರನೆಂಬ ಕಲಾಮೂರ್ತಿ,ಆ ಭೀಮೇ

ಶ್ವರನೆಂಬ ಕಲಾಮೂರ್ತಿಯ ಮಧ್ಯದಲ್ಲಿ ಕರ್ತಾರನೆಂಬ ಪ್ರಾಣಲಿಂಗಿ, ಆ ಕರ್ತಾರನೆಂಬ ಪ್ರಾಣಲಿಂಗಿಯ ಮಧ್ಯದಲ್ಲಿ ಈಶ್ವರ, ಆಈಶ್ವರನ,ಮಧ್ಯದಲ್ಲಿ, ವಾಯು, ಇಂತು ಅಮೂರ್ತಿಸದಾಖ್ಯದ ಸೃಷ್ಟಿ. ಆ ನಿಷ್ಕಲಶಿವನ ಮಧ್ಯದಲ್ಲಿ ಇಚ್ಛಾಶಕ್ತಿ, ಆ ಇಚ್ಛಾ ಶಕ್ತಿಯಮಧ್ಯದಲ್ಲಿ ವಿದ್ಯೆಯೆಂಬ ಕಲೆ, ಆ ವಿದ್ಯೆಯೆಂಬ ಕಲೆಯ ಮಧ್ಯದಲ್ಲಿ ಶಿವಲಿಂಗ,ಆ ಶಿವಲಿಂಗದ ಮಧ್ಯದಲ್ಲಿ, ಮೂರ್ತಿಸದಾಖ್ಯ, ಆ ಮೂರ್ತಿಸದಾಖ್ಯದ ಮಧ್ಯದಲ್ಲಿ,ಮಹಾರುದ್ರನೆಂಬ ಕಲಾಮೂರ್ತಿ, ಆ ಮಹಾರುದ್ರನೆಂಬ ಕಲಾಮೂರ್ತಿಯ ಮಧ್ಯದಲ್ಲಿ ರುದ್ರನು, ಆ ರುದ್ರನ ಮಧ್ಯದಲ್ಲಿ,ಅಗ್ನಿ. ಇಂತು ಮೂರ್ತಿಸದಾಖ್ಯದ ಸೃಷ್ಟಿ, ಆನಿಷ್ಕಲ ಶಿವನಮಧ್ಯದಲ್ಲಿ ಜ್ಞಾನಶಕ್ತಿ, ಆ ಜ್ಞಾನಶಕ್ತಿಯಮಧ್ಯದಲ್ಲಿ ಪ್ರತಿಷ್ಠೆಯೆಂಬಕಲೆ, ಆಪ್ರತಿಷ್ಠೆಯೆಂಬ ಕಲೆಯಮಧ್ಯದಲ್ಲಿ ಗುರುಲಿಂಗ, ಆಗುರುಲಿಂಗದ ಮಧ್ಯದಲ್ಲಿ, ಕರ್ತೃಸದಾಖ್ಯ; ಆ ಕರ್ತೃಸದಾಖ್ಯದ ಮಧ್ಯದಲ್ಲಿ, ಶರ್ವನೆಂಬ ಕಲಾಮೂರ್ತಿ, ಶರ್ವನೆಂಬ ಕಲಾಮೂರ್ತಿಯಮಧ್ಯದಲ್ಲಿ, ಚೈತನ್ಯನೆಂಬ ಮಹೇಶ್ವರ, ಆ ಚೈತನ್ಯನೆಂಬ ಮಹೇಶ್ವರನಮಧ್ಯದಲ್ಲಿ ವಿಷ್ಣು, ಆ ವಿಷ್ಣುವಿನ ಮಧ್ಯದಲ್ಲಿ ಅಪ್ಪು, ಇಂತು ಕರ್ತೃಸದಾಖ್ಯದ ಸೃಷ್ಟಿ. ಆನಿಷ್ಕಲ ಶಿವನ ಮಧ್ಯದಲ್ಲಿ ಕ್ರಿಯಾಶಕ್ತಿ, ಆ ಕ್ರಿಯಾಶಕ್ತಿಯ ಮಧ್ಯದಲ್ಲಿ ನಿವೃತ್ತಿಯೆಂಬ ಕಲೆ,ಆ ನಿವೃತ್ತಿಯೆಂಬ ಕಲೆಯ ಮಧ್ಯದಲ್ಲಿ ಆಚಾರಲಿಂಗ, ಆ ಆಚಾರಲಿಂಗದ ಮಧ್ಯದಲ್ಲಿ ಕರ್ಮಸದಾಖ್ಯ, ಆ ಕರ್ಮಸದಾಖ್ಯದ ಮಧ್ಯದಲ್ಲಿ, ಭವನೆಂಬ ಕಲಾಮೂರ್ತಿ, ಆ ಭವನೆಂಬ ಶೇಷಮೂರ್ತಿಯ ಮಧ್ಯದಲ್ಲಿ, ಅಂತರ್ಯಾಮಿಯೆಂಬ ಭಕ್ತ, ಆ ಅಂತರ್ಯಾಮಿಯೆಂಬ ಭಕ್ತನ ಮಧ್ಯದಲ್ಲಿ ಬ್ರಹ್ಮ, ಆ ಬ್ರಹ್ಮನ ಮಧ್ಯದಲ್ಲಿ ಪೃಥ್ವಿ, ಆ ಬ್ರಹ್ಮನಿಂದ ನರರು, ಸುರರು,ಅಸುರರು, ಅಂಡಜ, ಸ್ವೇದಜ, ಉದ್ಭಿಜ್ಜ, ಜರಾಯುಜವೆಂಬ ಸಚರಾಚರಂಗಳೆಲ್ಲವು ಹುಟ್ಟಿದುವು. ಇಂತಿವೆಲ್ಲವು ಶಿವನ ನೆನಹುಮಾತ್ರದಿಂದಲಾದವೈಯ್ಯಾ ಮಹಾಲಿಂಗ ಗುರು ಶಿವ ಸಿದ್ಧೇಶ್ವರಪ್ರಭುವೆ! ಪಂಚಮೂರ್ತಿಲಿಂಗೋದ್ಧರಣೆಯ ಸಂಬಂಧ ಸಮಾಪ್ತ ಮಂಗಳಮಹಾ.

---

ಗುರುಭ್ಯೋನಮಃ.

## ಶಾ ೦ ಭ ವೀ ಜ ಕ್ರೋ ದ್ಧ ರ ಣೆ.

ಇಂತೀ ಷಡ್ಚಿಹ್ನಾದಿ ಸಕಲದೇವತಾ ಮಂತ್ರಾಕ್ಷರ ಸ್ವರೂಪವಾಗಿ, ಶಿವಜ್ಞಾನವಹಂತಾ ಶಾಂಭವೀಜಕ್ರವನುದ್ಧರಿಸುವ ಲಕ್ಷಣವನು, ಅಕ್ಷರಂಗಳ ಬರೆವ ಕ್ರಮವನು, ಅಧಿದೈವಂಗಳನು, ಸೌಮ್ಯಜ್ಞಾನ ಸಾಧನಸಂಪತ್ತನು, ಶ್ರುತಿಗುರುವಜನಂಗಳಿಂ ಸಂಕ್ಷೇಪಮಾತ್ರವಾಗಿ ನಿರೂಪಿಸಲ್ಪಡುತ್ತಕ್ಕುದದೆಂತೆಂದೊಡೆ. ತತ್ವಜ್ಞರಾದವರು ಸುಸ್ಥಳದಲ್ಲಿ ವಾತುಲತಂತ್ರ ವಿಧಾನೋಕ್ತವಾಗಿ,ಭುಜಪತ್ರದಲ್ಲಿ ಹನ್ನೆರಡಂಗುಲ ವಿಸ್ತಾರಮಂ ಗೊಂಡು ಗೋರೋಚನ, ಕುಂಕುಮದರಸ, ಕರ್ಪೂರ, ಅಗರು, ಶ್ರೀಗಂಧಂಗಳೊಡನೆ, ಕೂಡಿಬರೆವ, ವರ್ಣಂಗಳಾವಾವುವೆಂದೊಡೆ:—ರಕ್ತವರ್ಣದ ಸೂತ್ರಂಗಳಿಂ ತೆಂಕಣಿಂ ಬಡಗನೆಯ್ದುವಹಾಗೆ, ಎರಡು ಸೂತ್ರಂಗಳಿಂ ಮಿಡಿಯಲಾಗಿ, ಚತುಸ್ಸೂತ್ರ ಪಾತನವಾದ ಜಕ್ರಕ್ಷೇತ್ರವು, ಗಣಿತಪ್ರಮಾಣಕ್ಕೆ ನೂರನಾಲ್ವತ್ತುನಾಲ್ಕಂಗುಲ ಪ್ರಮಾಣವಹುದು. ಬಳಿಕ ಚತುರಶ್ರಮಧ್ಯದಲ್ಲಿ, ಮೂಡ ಪಡುವ, ತೆಂಕ ಬಡಗವಾರಂಗುಲವಪ್ಪಹಾಗೆ, ಮಧ್ಯಸ್ಥಾನದಲ್ಲಿ, ಕವೆಯಾರದ ಕೊನೆಯನೂರಿ, ಮತ್ತೊಂದು ಮೊನೆಗೆ ಬತ್ತಿಯಂಸುತ್ತಿ,ಎರಡಂಗುಲಪ್ರಮಾಣದ ಹಾಗೆ ಮಾಡಿ ಪೀತವರ್ಣದಿಂ ತಿರುಹಲದು ಕರ್ಣಿಕಾವೃತ್ತವೆನಿಸುವುದು. ಆ ಕರ್ಣಿಕಾವೃತ್ತದ ಬಹಿಃಪ್ರದೇಶದಲ್ಲಿ ಒಂದುವೃತ್ತವ, ಮೂರಂಗುಲಪ್ರಮಾಣವಪ್ಪಹಾಗೆ ರಕ್ತವರ್ಣದಿಂಮತ್ತೊಂದು ವೃತ್ತವ ನಾಲ್ಕಂಗುಲಪ್ರಮಾಣದ ಹಾಗೆ ಹೆಚ್ಚಿಸಿ ಕೃಷ್ಣವರ್ಣದಿಂ, ಮತ್ತೊಂದು ವೃತ್ತವ ಐದಂಗುಲ ಪ್ರಮಾಣವಹಹಾಗೆ ಹೆಚ್ಚಿಸಿ ಶ್ವೇತವರ್ಣದಿಂ, ಮತ್ತೊಂದು ವೃತ್ತವ ಹೀಗೆ ಒಂದೊಂದು ಬಳಸಿಕೊಂಡಿಹ ಹಾಗೆ ತಿರುಹಲು, ಮಧ್ಯದಲ್ಲಿ ವರ್ಣಪ್ರಮಾತ್ಮಕವಾದ ವೃತ್ತತ್ರಯಂಗಳು ಮಂಡಲತ್ರಯಂಗಳೆನಿಸಿಕೊಂಬುವು. ಇನ್ನು ಕರ್ಣಿಕಾವೃತ್ತದಲ್ಲಿ ಕವೆಯಾರವನೂರುವ ರಂಧ್ರವಂ ಮಾಡಲದು, ಸೂಕ್ಷ್ಮಕರ್ಣಿಕೆಯೆನಿಸುವುದು. ಬಳಿಕದರ ಹೊರವಳಯೆಯದೊಳು, ಸುತ್ತಿಬರುವೊಲಕ್ಕಾಣಿಕೆಯಲ್ಲಿ ಶ್ವೇತವರ್ಣದಿಂ ಕೇಸರ ಸಹಿತವಾದ ನಾಲ್ಕೆಸಳನು, ಅದರ ಹೊರಗಣ ಎರಡನೆಯ ವೃತ್ತದಲ್ಲಿ ಎಂಟ

ದಳಂಗಳನು, ಅದರ ಹೊರಗೆ ಅಷ್ಟಪತ್ರಂಗಳನು, ಮೂರನೆಯ ಆವರಣದ ಲ್ಲಿ ರಕ್ತವರ್ಣದಿಂ ಹದಿನಾರುದಳಂಗಳನು, ಹದಿನಾರು ಉಪಳದಳಂಗಳನು, ಬಾಹ್ಯವೃತ್ತದಲ್ಲಿ, ಮೂವತ್ತೆರಡು ಮುಖಾಕಾರಂಗಳಂ ಸುತ್ತಿ ಬರೆಯಲು ಚಕ್ರನ್ಯಾಸಮುಗಿಯಿತು.

ಇನ್ನು ಪೀತವರ್ಣದಿಂ ಬರೆವ ಅಕ್ಷರನ್ಯಾಸ:—ಆ ಕರ್ಣಿಕಾವೃತ್ತದ ಮಧ್ಯದಲ್ಲಿ, ಶಿವಬೀಜವೆಂಬ ಹಕಾರವನು, ಪೂರ್ವದಳದಲ್ಲಿ ಸಕಾರವನು, ದಕ್ಷಿಣದಳದಲ್ಲಿ ಅಕಾರವನು, ಪಶ್ಚಿಮದಳದಲ್ಲಿ ಐಕಾರವನು, ಉತ್ತರದಳದ ಲ್ಲಿ ಕ್ಷಕಾರವನು ಬರೆವುದು. ಇನ್ನು ಆವರಣತ್ರಯಂಗಳಲ್ಲಿ ಬರೆವ ವ್ಯಾಪಕ ಸ್ವರವಿಕಲಕ್ಷರಂಗಳ ವಿವರ:—ಸಕಾರವನು ಪ್ರಥಮಾವರಣದ ಪೂರ್ವದಳ ದಲ್ಲಿ, ಅ ಆಕಾರಗಳನು ಮಧ್ಯಾವರಣದ ಪೂರ್ವದಳದಳಗಳಲ್ಲಿ, ಕಕಾರವನು ಬಾಹ್ಯವೃತ್ತದ ಇಂದ್ರದಳದಲ್ಲಿ', ಖಕಾರವನು ಇಂದ್ರಾಗ್ನಿಗಳ ಮಧ್ಯವಿ ದಿಕ್ಕಿನ ಮಧ್ಯದಳದಲ್ಲಿ, ಗಕಾರವನು ಆಪದಿಗ್ದಳದಲ್ಲಿ ಬರೆಯಲು, ಇಂದ್ರ ದಳ ಮೊದಲಾದ ಮೂರುದಳಂಗಳಲ್ಲಿ ಮೂರಕ್ಷರನ್ಯಾಸ ಮುಗಿಯಿತು.

ಈ ಮೂರರ ಮುಂದಣ ಅಗ್ನಿದಳವ ಸೇರಿದ ದಳಂಗಳಲ್ಲಿ ಅಕ್ಷರ ನ್ಯಾಸವಿಲ್ಲ. ಅದೇನುಕಾರಣವೆಂದೊಡೆ:—ಸ್ಪರ್ಶಾಕ್ಷರ ಇಪ್ಪತ್ತೈದರೊಳಗೆ ಮಕಾರವೊಂದು ಪ್ರಥಮಾವರಣದ ವ್ಯಾಪಕಾಕ್ಷರಂಗಳೊಳಗೆ ಸೇರಿದಕಾರ ಣ,ಅದನೊಂದಂ ಕಳೆದು,ಉಳಿದ ಇಪ್ಪತ್ತುನಾಲ್ಕು ಅಕ್ಷರಂಗಳನು ಬಾಹ್ಯವೃ ತ್ತದಲ್ಲಿಯ ಮೂವತ್ತೆರಡು ದಳಂಗಳೊಳಗೆ ಇಪ್ಪತ್ತುನಾಲ್ಕುದಳಂಗಳಲ್ಲಿ ನ್ಯಾಸಮಾಡಿದೊಡೆ ಎಂಟು ದಳಂಗಳುಳಿವುವು. ಅದುಕಾರಣವವರಲ್ಲಿ ನ್ಯಾಸವಿಲ್ಲ. ಈ ಕ್ರಮದಿಂದಲೇ ಈಶಾನ್ಯಾಂತಮಾಗಿ ತ್ರಿವರ್ಗಾಕ್ಷರನ್ಯಾ ಸವ ಮಾಡಬೇಕಾದುದು.

ಇನ್ನು ಷಾಕ್ಷರವನು ಪ್ರಥಮಾವರಣದ ಅಗ್ನಿದಳದಲ್ಲಿ, ಇಕಾರ ವನು, ಮಧ್ಯಾವರಣದ ಅಗ್ನಿದಳದಲ್ಲಿ, ಈಕಾರವನು ಪೂರ್ವೋಕ್ತಕ್ರಮವಾ ಗಿಯೇ ಅದರ ಸಮೀಪದಳದಲ್ಲಿ, ಘಕಾರವನು ಬಾಹ್ಯಾವರಣದ ಅಗ್ನಿದ ಳದಲ್ಲಿ ಜಕಾರ ಚಕಾರಂಗಳನು ಪೂರ್ವೋಕ್ತಕ್ರಮದಿಂದಲೇ ಮುಂ ದಣ ಎರಡುದಳಂಗಳಲ್ಲಿ, ಶಕಾರವನು ಪ್ರಥಮಾವರಣದ ವಾಯವ್ಯದಳ

ದಲ್ಲಿ, ಉಕಾರವನು ಮಧ್ಯಾವರಣದ ವಾಯುವ್ಯದಳದಲ್ಲಿ, ಊಕಾರವನು, ಅದರ ಸಮೀಪದಳದಲ್ಲಿ, ಛಕಾರವನು ಬಾಹ್ಯಾವರಣದ ದಳದಲ್ಲಿ, ಜಕಾರ ಝಕಾರಂಗಳನು ಮುಂದಣ ಎರಡು ದಳಂಗಳಲ್ಲಿ, ವಕಾರವನು ಪ್ರಥಮಾ ವರಣದ ನೈರುತ್ಯದಳದಲ್ಲಿ, ಋಕಾರವನು ಮಧ್ಯಾವರಣದ ನೈರುತ್ಯದ ಳದಲ್ಲಿ, ಋೂಕಾರವನು ಅದರ ಸಮೀಪದಳದಲ್ಲಿ, ಞಕಾರವನು ಬಾಹ್ಯಾವ ರಣದ ನೈರುತ್ಯದಳದಲ್ಲಿ, ಟಕಾರ ಠಕಾರಂಗಳನು ಮುಂದಣ ಎರಡುದಳಂ ಗಳಲ್ಲಿ, ಲಕಾರವನು ಪ್ರಥಮಾವರಣದ ವರುಣದಳದಲ್ಲಿ, ಌ ೡಕಾರಗಳನು ಮಧ್ಯಾವರಣವರುಣದಳದಲ್ಲಿ, ಡಕಾರವನು ಬಾಹ್ಯಾವರಣ ವರುಣದಳದಲ್ಲಿ, ಢಣಕಾರಗಳನು ಮುಂದಣಎರಡುದಳಂಗಳಲ್ಲಿ, ರಕಾರವನು ಪ್ರಥಮಾವರ ಣದ ವಾಯುವ್ಯದಳದಲ್ಲಿ, ಏ ಐ ಕಾರವನು ಮಧ್ಯಾವರಣದಳಗಳಲ್ಲಿ ತಕಾರ ವನು ಬಾಹ್ಯಾವರಣದ ಮಾರುತದಳದಲ್ಲಿ, ಥಕಾರ ದಕಾರಂಗಳನು ಮುಂದ ಣ ಎರಡು ದಳಂಗಳಲ್ಲಿ, ಯಕಾರವನು ಪ್ರಥಮಾವರಣದ ಕುಬೇರದಳದಲ್ಲಿ, ಓಕಾರವನು ಮಧ್ಯಾವರಣದ ಕುಬೇರದಳದಲ್ಲಿ, ಔಕಾರವನು ಅದರ ಸಮೀಪದಳದಲ್ಲಿ, ಧಕಾರವನು ಬಾಹ್ಯಾವರಣದ ಕುಬೇರದಳದಲ್ಲಿ, ನಕಾರ ಪಕಾರಂಗಳನು ಮುಂದಣ ಎರಡು ದಳಂಗಳಲ್ಲಿ, ಮಕಾರವನು ಪ್ರಥಮಾ ವರಣದ ಈಶಾನ್ಯದಳದಲ್ಲಿ, ಅಕಾರವನು ಪತ್ತಿರ್ದ ಬಿಂದು ಸ್ವರೂಪವನು ಮಧ್ಯಾವರಣದ ಈಶಾನ್ಯದಳದಲ್ಲಿ, ಬಿಂದುದ್ವಿಭಾವವನೆಯ್ದಿ ಅಕಾರವ ಪತ್ತಿರ್ದ ವಿಸರ್ಗವನು ಅದರ ಸಮೀಪದಳದಲ್ಲಿ, ಫಕಾರವನು ಬಾಹ್ಯಾವರ ಣದ ಈಶಾನ್ಯದಳದಲ್ಲಿ, ಬಕಾರ ಭಕಾರಂಗಳನು ಮುಂದಣ ಎರಡುದಳಂ ಗಳಲ್ಲಿ ನ್ಯಾಸವ ಮಾಡಲು, ಈ ಆವರಣದ ಕ್ರಮಂಗಳೊಳಗೆ ಪ್ರಥಮಾ ವರಣದ ಪೂರ್ವದಳ ಮೊದಲಾದುವಂ ಕುರಿತು,' ಆ ಯಾ ದಳ ಲಕ್ಷ ಣಂಗಳಲ್ಲಿ ನ್ಯಾಸವಾದ ನಾಲ್ವತ್ತೆಂಟಕ್ಷರಂಗಳಿಗೆ ಐವತೊಂದಕ್ಷರಂಗಳ ವಿಭಾಗಸಂಖ್ಯೆಯಾಗುವುದೆಂತೆಂದೊಡೆ:— ಸೌರಕಲಾನ್ಯಾಸದಲ್ಲಿ ಮಕಾರ ಯಕಾರ ಕೂಡಿಹುದಾಗಿ ಆ ಮಕಾರ ಯಕಾರ ಸಮೀಪಸ್ಥವಾಗಿಹುದು.ಅದು. ನಿಮಿತ್ತಂ,|ಮಕಾರವಾದಿಯಾಗಿ ವ್ಯಾಪಕಾಕ್ಷರ ಹತ್ತರೊಳಗೆ ಯ ರ ಲ ವ ಶ ಷ ಸ ಹ, ಎಂಬ ಎಂಟಕ್ಷರವು ಪ್ರಥಮವೃತ್ತದ ಈಶಾನ್ಯದಷ್ಟದ

ಳಂಗಳಲ್ಲಿ ನ್ಯಾಸವಾದುವು. ಹಕಾರ ಶಿವಬೀಜವಪ್ಪಕಾರಣ ಸೂಕ್ಷ್ಮಕರ್ಣಿಕೆಯಲ್ಲಿ ನ್ಯಾಸವಾಯಿತು. ಲಕಾರ ಳಕಾರಂಗಳಿಗೆ ಭೇದವಿಲ್ಲದ ಕಾರಣ, ಆ ಳಕಾರ ಲಕಾರಾಂತರ್ಗತವಾಯಿತು. ಅಲ್ಲಿ ಆ ಳಕಾರ ಆತ್ಮ ಬೀಜವಪ್ಪ ಕಾರಣ, ಕರ್ಣಿಕಾದಳ ನ್ಯಸ್ತವಾದ ಆ ಆತ್ಮ ಬೀಜವೆನಿಸುವ ಅಕಾರಾಂತರ್ಗತವಾದಡೆಯು ಅಹುದು. ಕ್ಷಕಾರ ವಿದ್ಯಾತತ್ವವಾದ ಕಾರಣ ಜ್ಞಾನಶಕ್ತಿಸ್ವರೂಪದಿಂ, ಶಿವಸಮೀಪಸ್ಥವಾಗಿ ಬಡಗಣ ಕರ್ಣಿಕಾದಳದಲ್ಲಿ ನ್ಯಾಸವಾಯಿತು. ಸ್ವರಾಕ್ಷರಂಗಳು ತತ್ವಬೀಜ ಮೂರ್ತಿಬೀಜಂಗಳೆಂದು ದ್ವಿರೂಪವಹ ಕಾರಣ, ಮಧ್ಯವೃತ್ತದ ಪೂರ್ವಾದ್ಯಷ್ಟದಳ ಅಷ್ಟ ಉಪದಳಂಗಳಲ್ಲಿ ನ್ಯಾಸವಾದುವು. ಸ್ಪರ್ಶಾಕ್ಷರಗಳಿಪ್ಪತ್ತುನಾಲ್ಕು ಬಾಹ್ಯವೃತ್ತದ ಪೂರ್ವಾದಿಯಾಗಿ, ಮೂರು ಮೂರು ದಳಂಗಳ ಮುಂದಣ ಉಪದಳಂಗಳಂ ಬಿಟ್ಟು ಇಪ್ಪತ್ತುನಾಲ್ಕು ದಳಂಗಳಲ್ಲಿ ನ್ಯಸ್ತವಾದುವು. ಈ ಪರಿಯಿಂ ಚಕ್ರದಳಂಗಳಲ್ಲಿ ಏಕಪಂಚಾಶದ್ವರ್ಣನ್ಯಾಸ ಮುಗಿಯಿತು. ಇನ್ನು ದೇವತಾನ್ಯಾಸ. ಸೂಕ್ಷ್ಮಕರ್ಣಿಕಾಮಧ್ಯದಲ್ಲಿ, ಸಮಸ್ತ ಮಂತ್ರಾಧಾರ ರೂಪಿಣಿಯಾದ ಪರಶಕ್ತಿ. ಪೂಜಾಯೋಗ್ಯಳು. ಆ ಸೂಕ್ಷ್ಮಕರ್ಣಿಕೆಯ ಬಳಸಿರ್ದ ಕರ್ಣಿಕಾ ವೃತ್ತದ ಪೂರ್ವಾದಿಯಾದ ಚತುರ್ದಳಂಗಳಲ್ಲಿ, ಅಂಬಿಕೆ, ಗಣಾನಿ, ಈಶ್ವರಿ, ಮನೋನ್ಮನಿ, ಎಂಬ ನಾಲ್ವರು ಶಕ್ತಿಯರು ಕಾರಣವಾಗಿಹರು. ಪ್ರಥಮಾವರಣದ ಪೂರ್ವಾದ್ಯಷ್ಟಪತ್ರಂಗಳಲ್ಲಿ ವಾಮೆ, ಜ್ಯೇಷ್ಠೆ ರೌದ್ರಿ, ಕಾಳಿ, ಭಾವೆ, ಪ್ರಮಥನಿ, ಸರ್ವಭೂತದಮನಿ, ಮನೋನ್ಮನಿ ಎಂಬ ಶಕ್ತಿಯರು ಕಾರಣವಾಗಿಹರು. ದ್ವಿತೀಯಾವರಣದ ವೃತ್ತದ ಅಷ್ಟ ದಳಂಗಳಂಗಳಲ್ಲಿ, ಉಮೇಶ್ವರ, ಚಂಡೇಶ್ವರ, ನಂದಿಕೇಶ್ವರ, ಮಹಾಕಾಳ ಭೃಂಗಿರಿಟಿ, ಗಣೇಶ್ವರ, ವೃಷಭೇಶ್ವರ, ಷಣ್ಮುಖನೆಂಬ ಅಷ್ಟಗಣೇಶ್ವರರು ಕಾರಣವಾಗಿಹರು. ಉಳಿದ ದಳಂಗಳಲ್ಲಿ, ಭವ, ಶರ್ವ, ರುದ್ರ, ಮಹಾದೇವ, ಸೋಮ, ಭೀಮ, ಉಗ್ರ, ಪಶುಪತಿಯೆಂಬ ಅಷ್ಟಮೂರ್ತಿಗಳು ಕಾರಣವಾಗಿಹರು. ಮೂರನೆಯ ಆವರಣದ, ಇಪ್ಪತ್ತುನಾಲ್ಕುದಳಂಗಳಲ್ಲಿ, ಅನಂತ, ಸೂಕ್ಷ್ಮ, ಶಿವೋತ್ತಮ, ಏಕನೇತ್ರ, ಏಕರುದ್ರ, ತ್ರಿಮೂರ್ತಿ, ಶ್ರೀಕಂಠ, ಶಿಖಂಡಿಯೆಂಬ ಅಷ್ಟವಿದ್ಯೇಶ್ವರರೂ, ಇಂದ್ರ, ಅಗ್ನಿ, ಯಮ, ನೈರುತ್ಯ

ವರುಣ, ವಾಯವ್ಯ, ಕುಬೇರ, ಈಶಾನ್ಯ, ಎಂಬ ಅಷ್ಟದಿಕ್ಪಾಲಕರೂ, ಧರ, ಧ್ರುವ, ಸೋಮ, ಅಪ, ಸೀಲ, ನಳ, ಪ್ರತ್ಯೇಕ, ಪ್ರಭಾವರೆಂಬ ಅಷ್ಟ ವಸುಗಳೂ ಕಾರಣವಾಗಿಹರು.

ಮತ್ತಮೀಚಕ್ರಸಂಬಂಧವು ಶಾರದಾತಿಲಕದಲ್ಲಿ ಇನ್ನೊಂದುಪ್ರಕಾರದಿಂ ಹೇಳಲ್ಪಟ್ಟುದು. ಮಧ್ಯಬಟುವಿನಲ್ಲಿರ್ದ ಹಕಾರವೇ ಉಮೆ. ಅದರಿಂದ ಮೇಲಣ ಬಟುವಿನ ನಾಲ್ಕೆಸಳಿನಲ್ಲಿಹ ನಾಲ್ಕಕ್ಷರಂಗಳೆ ನಾಲ್ಕು ಶಕ್ತಿರೂಪವನೆಯ್ದಿದ ವಿವರ. ಸಕಾರವೆ ಅಂಬಿಕೆ, ಆಕಾರವೆ ಗಣಾನಿ, ಐಕಾರವೆ ಈಶ್ವರಿ, ಕ್ಷಕಾರವೆ ಮನೋನ್ಮನಿ; ಅದರಿಂ ಮೇಲಣ ಬಟುವಿನ ಎಂಟೆಸಳಿಲ್ಲಿಹ ಎಂಟಕ್ಷರಂಗಳೆಂಟುಶಕ್ತಿಸ್ವರೂಪವನೆಯ್ದಿದ ವಿವರ:— ಸಕಾರವೆ ವಾಮೆ, ಷಕಾರವೆ ಜ್ಯೇಷ್ಠೆ, ಶಕಾರವೆ ರೌದ್ರಿ, ವಕಾರವೆ ಕಾಳಿ, ಲಕಾರವೆ ಭಾವೆ, ರಕಾರವೆ ಪ್ರಮಥನಿ, ಯಕಾರವೆ ಸರ್ವಭೂತದಮನಿ, ಮಕಾರವೆ ಮನೋನ್ಮನಿ. ಅದರಿಂದ ಮೇಲಣ ಬಟುವಿನ ಹದಿನಾರುದಳಂಗಳಲ್ಲಿ, ಹದಿನಾರು ಅಕ್ಷರಂಗಳೆ ಹದಿನಾರು ಗಣೇಶ್ವರರಾದ ವಿವರ. ಅಃ ಎಂಬುದೆ, ಷಣ್ಮುಖ, ಅಂ ಎಂಬುದೆ ಭವ, ಔ ಎಂಬುದೆ ಶರ್ವ, ಓ ಎಂಬುದೆ ರುದ್ರ, ಐಕಾರವೆ ಮಹಾದೇವ, ಏಕಾರವೆ ಸೋಮ, ೠಕಾರವೆ, ಭೀಮ, ೠಕಾರವೆ ಉಗ್ರ, ಌೂಕಾರವೆ ಪಶುಪತಿ, ಌಕಾರವೆ ಉಮೇಶ್ವರ, ಊಕಾರವೆ ಚಂಡೇಶ್ವರ,ಉಕಾರವೆ ನಂದಿಕೇಶ್ವರ, ಇಕಾರವೆ ಮಹಾಕಾಳ, ಈಕಾರವೆ ಭೃಂಗಿರಿಟಿ, ಆಕಾರವೆ ಗಣೇಶ್ವರ, ಅಕಾರವೆ ವೃಷಭೇಶ್ವರ. ಅದರಿಂದ ಮೇಲಣ ಬಟುವಿನ ಮೂವತ್ತೆರಡು ದಳಂಗಳೊಳಗೆ ಎಂಟುದಳಂಗಳು ಶೂನ್ಯದಳಂಗಳು. ಉಳಿದ ಇಪ್ಪತ್ತು ನಾಲ್ಕುದಳಂಗಳಲ್ಲಿಹ ಇಪ್ಪತ್ತುನಾಲ್ಕು ಅಕ್ಷರಂಗಳೆ ಅಷ್ಟವಿದ್ಯೇಶ್ವರರು, ಅಷ್ಟದಿಕ್ಪಾಲಕರು, ಅಷ್ಟವಸುಗಳಾದ ವಿವರ. ಕಕಾರವೆ ಅನಂತ, ಖಕಾರವೆ ಸೂಕ್ಷ್ಮ, ಗಕಾರವೆ ಶಿವೋತ್ತಮ, ಘಕಾರವೆ ಏಕನೇತ್ರ, ಙಕಾರವೆ ಏಕರುದ್ರ, ಚಕಾರವೆ ತ್ರಿಮೂರ್ತಿ, ಛಕಾರವೆ ಶ್ರೀಕಂಠ, ಜಕಾರವೆ ಶಿಖಂಡಿ, ಝಕಾರವೆ ಇಂದ್ರ, ಞಕಾರವೆ ಅಗ್ನಿ, ಟಕಾರವೆ ಯಮ, ಠಕಾರವೆ ನೈರುತ್ಯ, ಡಕಾರವೆ ವರುಣ, ಢಕಾರವೆ ವಾಯವ್ಯ, ಣಕಾರವೆ ಕುಬೇರ, ತಕಾರವೆ ಈಶಾನ್ಯ, ಥಕಾರವೆ ಧರ, ದಕಾರವೆ ಧ್ರುವ,

ಥಕಾರವೆ ಸೋಮ, ನಕಾರವೆ ಅಪ, ಪಕಾರವೆ ನೀಲ, ಫಕಾರವೆ ನಳ, ಬಕಾರವೆ ಪ್ರತ್ಯೇಶ,ಭಕಾರವೆ ಪ್ರಭಾವ; ಅದರಿಂದ ಮೇಲಣ ಬಟುವಿನೊಳಗಿಹ ಮೂವತ್ತೆರಡು ದಳಂಗಳೊಳಗೆ ಇಂದ್ರದಿಕ್ಕಿನ ನಾಲ್ಕುದಳಂಗಳ ವಾಸ್ತವರು:—ಇಂದ್ರ, ಸತ್ಯ, ಭೃಂಗಿ, ಅಂತರ್ಲಕ್ಷ್ಯ; ಅಗ್ನಿದಿಕ್ಕಿನ ನಾಲ್ಕುದಳಂಗಳ ವಾಸ್ತವರು:—ಅಗ್ನಿ, ಪೂಷಾ, ವಿಧಿ,ದಮ. ಯಮದಿಕ್ಕಿನ ನಾಲ್ಕುದಳಂಗಳ ವಾಸ್ತವರು:—ಯಮ,ಭಾಸ್ಕರ, ಪುಷ್ಪದತ್ತ, ಬಲಾಟ; ನೈರುತ್ಯದಿಕ್ಕಿನ ನಾಲ್ಕುದಳಂಗಳ ವಾಸ್ತವರು:—ನೈರುತ್ಯ, ದೌವಾರಿಕ, ಸುಗ್ರೀವ, ಅರುಣ; ವರುಣದಿಕ್ಕಿನ ನಾಲ್ಕುದಳಂಗಳ ವಾಸ್ತವರು:—ವರುಣ, ಅಸುರ, ಗಹ್ವರ, ವೇಗ; ವಾಯವ್ಯದಿಕ್ಕಿನ ನಾಲ್ಕುದಳಂಗಳ ವಾಸ್ತವರು:—ವಾಯವ್ಯ,ನಾಗ, ಮುಖ್ಯ, ಸೋಮ; ಕುಬೇರದಿಕ್ಕಿನ ನಾಲ್ಕುದಳಂಗಳ ವಾಸ್ತವರು:—ಕುಬೇರ ಅಘೂರ, ದಿತಿ, ಅದಿತಿ; ಈಶಾನ್ಯದಿಕ್ಕಿನ ನಾಲ್ಕುದಳಂಗಳ ವಾಸ್ತವರು:—ಈಶಾನ್ಯ, ಪರ್ಜನ್ಯ, ಜಯಂತ, ಶಂಕರ; ಇನ್ನು ವಚನ:—ಅಣುವಿಂಗೆ ಅಣುವಾಗಿ, ಮಹತ್ತಿಂಗೆ ಮಹತ್ತಾಗಿ, ಪರಿಪೂರ್ಣವಾದ ಪರವೆಂಬ ಪ್ರಸಾದ ಮೂರ್ತಿಯ ಇರವ ಹೇಳಿಹೆ ಕೇಳಿರಣ್ಣ! ಮುಂದೆ ತಾರಾಬೀಜ, ಹಿಂದೆ ಸುನಾದಬೀಜ, ಬಲದಲ್ಲಿ ಆತ್ಮಬೀಜ, ಎಡದಲ್ಲಿ ವಿದ್ಯಾಬೀಜ, ಎಂಟರಲ್ಲಿ ಅಷ್ಟೈಶ್ವರ್ಯ, ಅಷ್ಟಶಕ್ತಿ ಬೀಜ, ಹದಿನಾರರಲ್ಲಿ ಕಲೆ ಕಲಾಪತಿಗಳು, ಮೂವತ್ತೆರಡರಲ್ಲಿ ವಿಕಲೆ ವಿಕಲಾಪತಿಗಳು, ಇಂತೀ ತ್ರಿಮಂಡಲಮಧ್ಯದ ಸೂಕ್ಷ್ಮಕರ್ಣಿಕೆಯಲ್ಲಿಹ ಶುದ್ಧಪ್ರಸಾದವನು, ಮಹಾನುಭಾವರ ಸಂಗದಲ್ಲಿ ಧರಿಸಿವೆನು ಕಣಾ! ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರಾ!ತನುವೆಂಬ ಭೂಮಿಯಮೇಲೆ, ಶೃಂಗಾಟದ ಇಂದ್ರಕೂಟಗಿರಿಯೆಂಬ ಕೈಲಾಸದಲ್ಲಿ, ಉತ್ತರ ದಕ್ಷಿಣ ಪೂರ್ವ ಪಶ್ಚಿಮ ದಳದಲ್ಲಿ, ಆತ್ಮಶಕ್ತಿ ಬಿಂದು ನಾದಗಳ ಮಧ್ಯದಲ್ಲಿ, ಶೂನ್ಯಸಿಂಹಾಸನವೆಂಬ ಸುಜ್ಞಾನಪೀಠದಮೇಲೆ, ನೀವು ಮುಹೂರ್ತಗೊಂಡಿಪರಾಗಿ ಕಂಡು ಹರುಷಿತನಾದೆನು. ಸೂರ್ಯಮಂಡಲದ ದ್ವಾತ್ರಿಂಶದ್ದಳದ ರುದ್ರರು ರುದ್ರಶಕ್ತಿಯರು ನಿಮ್ಮನೋಲೈಸುತಿಹರು. ಚಂದ್ರಮಂಡಲದ ಷೋಡಶ ದಳದ ರುದ್ರರು ರುದ್ರಶಕ್ತಿಯರು ನಿಮ್ಮನೋಲೈಸುತ್ತಿಹರು. ಅಗ್ನಿಮಂಡಲದ ಅಷ್ಟದಳದ ರುದ್ರರು ರುದ್ರಶಕ್ತಿಯರು

ನಿಮ್ಮನೋಲೈಸುತ್ತಿಹರು. ಈ ಪರಿಯಿಂದ ದೇವರ ದೇವನ ಓಲಗವನೇನೆಂದು ಹೇಳುವೆನು. ಮತ್ತೆ ಭೇರಿ, ಮೃದಂಗ, ನಾಗಸರ, ಕೊಳಲು, ವೀಣೆ, ಕಹಳೆ, ಘಂಟೆ, ಶಂಖ, ನಾನಾವಿಧದ ಕೇಳಿಕೆಯವರಲ್ಲಿ, ರಾಜಿಸುವ ರಾಜಯೋಗವ ನಿಜಗುರು ಸ್ವತಂತ್ರಸಿದ್ಧ ಲಿಂಗೇಶ್ವರ ನಿಮ್ಮ ಶರಣರಾದ ರಾಜಯೋಗಿಗಳೆ ಬಲ್ಲರು! ಹೃದಯ ಕಮಲದ ಅಷ್ಟದಳದ ದ್ವಾತ್ರಿಂಶತ್ಕುಸುಮ ಮಧ್ಯದಲ್ಲಿರ್ಪನು ಸೂರ್ಯ, ಆ ಸೂರ್ಯನ ಮಧ್ಯದಲ್ಲಿರ್ಪನು ಚಂದ್ರ, ಆ ಚಂದ್ರನ ಮಧ್ಯದಲ್ಲಿರ್ಪನು ಅಗ್ನಿ, ಆ ಅಗ್ನಿಯ ಮಧ್ಯದಲ್ಲಿರ್ಪುದು ಕಾಂತಿ, ಆ ಕಾಂತಿಯ ಮಧ್ಯದಲ್ಲಿರ್ಪುದು ಸುಜ್ಞಾನ, ಆ ಸುಜ್ಞಾನದ ಮಧ್ಯದಲ್ಲಿರ್ಪುದು ಚಿದಾತ್ಮ, ಆ ಚಿದಾತ್ಮನ ಮಧ್ಯದಲ್ಲಿರ್ಪುದು ಚಿತ್ಪ್ರಕಾಶ ಸ್ವರೂಪಮಪ್ಪ ಪರಶಿವನು,ಅಂತಪ್ಪ ಪರಶಿವನನು, ಎನ್ನಾ ಸುಜ್ಞಾನ ಕಾಯದ ಮಸ್ತಕದ ಮೇಲೆ ಹಸ್ತವನಿರಿಸಿ, ಮನ ಭಾವ ಕರಣೇಂದ್ರಿಯಂಗಳಿಂ ಸ್ವರೂಪೀಕರಿಸಿ, ದೃಷ್ಟಿಗೆ ತೋರಿ, ಕೈಯಲ್ಲಿ ಲಿಂಗವ ಕೊಟ್ಟ ಚನ್ನಬಸವಣ್ಣನ ಶ್ರೀಪಾದಕ್ಕೆ, "ನಮೋನಮೋ" ಎಂದು ಬದುಕಿದೆನಯ್ಯ ಪ್ರಭುವೆ ಕಪಿಲಸಿದ್ಧಮಲ್ಲಿಕಾರ್ಜುನಾ! ಶಾಂಭವೀ ಚಕ್ರೋದ್ಧರಣೆಯ ಸಂಬಂಧ ಸಮಾಪ್ತ ಮಂಗಳಮಹಾ.

---

ಗುರುಭ್ಯೋನಮಃ

## ವೃ ಷ ಭೋ ದ್ಧ ರ ಣೆ.

ಇಂತಪ್ಪ ನಿತ್ಯ ನಿರವಯವ ನಿರಂಜನ 'ಸತ್ಯ ಜ್ಞಾನಾನಂದ ಮಯವಪ್ಪ, ಅಖಂಡತೇಜೋಮೂರ್ತಿಯಾದ ಮಹಾಘನಲಿಂಗವು, ಸ್ವಲೀಲೆಯಿಂ, ಸಕಲತತ್ತ್ವಬ್ರಹ್ಮಾಂಡ ಜಗತ್ಸಚರಾಚರಂಗಳಂ ರಚಿಸಿ, ತಾನವಕುದ್ಧಾರಕರ್ತೃವೆನಿಸಿ, ತನಗೊಂದಾಧಾರವ ಯೋಚಿಸಲ್ಕಾಕ್ಷಣ, ತನ್ನ ನಾಡಿಚಿಚ್ಛೈತನ್ಯವೇ ಸ್ಫುರಿಸಿ ಮೂರ್ತಿಗೊಂಡು, ಷಡುಸ್ಥಲಜ್ಞಾನವೆ ಪ್ರಾಣ, ಪಂಚಾಚಾರವೆ ಅಂಗವಾಗಿ, ಭಸ್ಮೋದ್ಧೂಳಿತ ವಿಗ್ರಹಗಾತ್ರದಿಂ, ರುದ್ರಾಕ್ಷಾಭರಣ ರಜತಾಲಂಕಾರದಿಂ, ಪಂಚಾಕ್ಷರೀ ಮಂತ್ರಭಾಸಾಸಮೇ

ತನಾಗಿ, ಭಕ್ತಿಭಾವಾಂತಃಕರಣದಿಂ, ಕರಕಮಲವಂ ಮುಗಿದು, ಬಿನ್ನ ವಿಸುತಿರ್ದ ಜಗದಾನಂದ, ಕಾರಣಪುರುಷ, ಅನಾದಿ ಭಕ್ತನಪ್ಪ, ನಂದಿಕೇಶ್ವರನೆ ಸದ್ಧರ್ಮವಾಹನವೆನಿಸಿ, ಜಗವನುದ್ಧರಿಸಿದಂ. ಆ ವೃಷಭೇಶ್ವರನ ಸ್ವರೂಪಲಕ್ಷಣ ಭಕ್ತಿ ಪ್ರಭಾವಾತಿಶಯವೆಂತೆಂದೊಡೆ:—ಅಕಾರ ಉಕಾರಂಗಳೆ ಶೃಂಗಂಗಳು, ಮಕಾರವೇ ಮುಖ, ಓಂಕಾರವೆ ಶಿರಸ್ಸು, ಯಕಾರಂಗಳೆ ಕರ್ಣಂಗಳು, ವಕಾರವೆ ತ್ವಕ್ಕು, ಶಿಕಾರಂಗಳೆ ನೇತ್ರಂಗಳು, ನಕಾರವೆ ನಾಸಾಪುಟಂಗಳು, ಬಿಂದು ಕಳೆಗಳೆ ದಂತಪಙ್ತಿಗಳು, ಮಕಾರವೇ ಜಿಹ್ವೆ, ನಾದವೆ ಹುಂಕಾರಸ್ವರ, ಬಸವಾಕ್ಷರ ತ್ರಯವೆ ಕೊರಳು ಹಿಳಿಲು ಬೆನ್ನ ಸುಳಿ, ಹ್ರಂ ಹ್ರಿಂ ಹ್ರುಂ ಹ್ರೈಂ ಹ್ರೌಂ ಹ್ರಃ, ಎಂಬುವೆ ಬಾಲ, ಪೃಷ್ಠ, ವೃಷಣ, ಗುಹ್ಯ,ನಾಭಿ, ಗರ್ಭ; ಸಪ್ತಕೋಟಿಮಹಾಮಂತ್ರಂಗಳೆ ರೋಮಂಗಳು, ಪರೆ, ಪಶ್ಯಂತಿ, ಮಧ್ಯಮೆ, ವೈಖರಿ, ಎಂಬ ಚತುಸ್ಸ್ವರಂಗಳೆ ಚರಣಂಗಳು, ಹ್ರೀಂಕಾರವೆ ಅಂಗ, ಹಕಾರವೆ ಪ್ರಾಣ, ಇಂತಪ್ಪ ಮಂತ್ರ ಮೂರ್ತಿಯಾದ ವೃಷಭೇಶ್ವರನ ಸರ್ವಕಲಾಸಾರೋದ್ಧಾರವೆಂತೆಂದೊಡೆ:—ಅಜಪಗಾಯತ್ರಿಯೆ ಶೃಂಗಂಗಳು, ಪರಮಶಿವಾಗಮವೆ ಶಿರಸ್ಸು, ಧನುರ್ವೇದ ಗಾಂಧರ್ವವೇದವೆ ಕರ್ಣಂಗಳು, ಯಜುರ್ವೇದ ಅಥರ್ವಣವೇದವೆ ನೇತ್ರಂಗಳು, ಹ್ರಸ್ವದೀರ್ಘಂಗಳೆ ನಾಸಾಪುಟಂಗಳು, ವ್ಯಾಪಕಾಕ್ಷರವೆ ಮುಖ, ಸ್ವಾರಾಕ್ಷರವೆ ದಂತಪಂಕ್ತಿಗಳು, ವಿಕಲಕ್ಷರವೆ ಜಿಹ್ವೆ, ಸ್ವರಕರಣಂಗಳೆ ಹುಂಕಾರರವ, ಆಗಮಂಗಳೆ ಕಂಠ, ಸ್ಮೃತಿಗಳೆ ಹಿಣಿಲು, ಪುರಾಣಂಗಳೆ ಬೆನ್ನಸುಳಿ, ಶಾಸ್ತ್ರಂಗಳೆ ಬಾಲ, ತರ್ಕತಂತ್ರಂಗಳೆ ಪೃಷ್ಠ, ಉಪನಿಷತ್ತುಗಳೆ ವೃಷಣ, ರಹಸ್ಯಾಗಮಂಗಳೆ ಗುಹ್ಯ, ಸರ್ವಪದಾರ್ಥಸಿದ್ಧಿಯೇ ನಾಭಿ, ಸರ್ವತತ್ವಾಂತರ್ಗತವೆ ಗರ್ಭ, ಉಪಶಾಸ್ತ್ರಂಗಳೆ ರೋಮಂಗಳು, ಉದಾತ್ತಾನುದತ್ತ ಸ್ವರಿತ ಪ್ರಚಯಂಗಳೆ ಚರಣಂಗಳು, ವೇದಂಗಳೆ ಅಂಗ, ಪರಮವೀರಶೈವಾಗಮವೆ ಪ್ರಾಣ, ಇಂತಪ್ಪ ಸರ್ವಜ್ಞಮೂರ್ತಿಯಾದ ವೃಷಭೇಶ್ವರನ ಭಕ್ತಿ ಸಾರೋದ್ಧಾರಪ್ರಭಾವವೆಂತೆಂದೊಡೆ:— ನಿರ್ಮೋಹ ನಿರಹಂಕಾರಂಗಳೆ ಶೃಂಗಂಗಳು, ನವ ಸ್ಮರಣೆವೆ ಶಿರಸ್ಸು, ಲಕ್ಷಬಾಹ್ಯನಾದಂಗಳೆ ಕರ್ಣಂಗಳು

ಮನನ ನಿಧಿಧ್ಯಾಸಂಗಳೆ ನೇತ್ರಂಗಳು,ಶಿವಧ್ಯಾನಸಂಸ್ಕಾರ ಸೌರಭವೆ ನಾಸಾ ಪುಟಂಗಳು, ಸತ್ಯವೆ ಮುಖ, ಸದ್ಗುಣವೆ ದಂತಪಂಕ್ತಿಗಳು, ಶಿವರತಿಸಾರ ಸೌಖ್ಯವೆ ಜಿಹ್ವೆ, ಶಿವಾನುಭವ ಪ್ರತಿಪಾದಕ ಗುಣ ಷಟ್ಕವೆ ಹುಂಕಾರ ರವ, ಧೃಡಭಾವವೆ ಕಂಠ, ನೈಷ್ಠೆಯೆ ಹಿಣಿಲು, ಏಕೋದೇವ ಪ್ರತಿಷ್ಠಾವ ಹಿತ್ವವೆ ಬೆನ್ನಸುಳಿ, ಭವಸಾಗರೋತ್ತಾರ ಪಾರಾವಾರಗುಣವೆ ಬಾಲ, ಅ ಲೌಕಿಕಸ್ಥಿತಿಯೆ ಪೃಷ್ಠ, ಇಷ್ಟಾರ್ಥಸಿದ್ಧಿಕರವೆ ವೃಷಣ, ಶಿವಜ್ಞಾನರಹಸ್ಯ ವೆ ಗುಹ್ಯ, ಚಿದಾಕಾಶವೆ ನಾಭಿ, ಶಿವಕಥಾ ಮಹಿಮ ಗುಣ ಗರ್ಭೀಕೃತವೆ ಗ ರ್ಭ, ಸಕಲ ಕ್ರಿಯಾಸಂಪತ್ತೆ ರೋಮಂಗಳು, ಕರ್ಮ ಭಕ್ತಿ ಜ್ಞಾನ ವೈ ರಾಗ್ಯಂಗಳೆ ಚರಣಂಗಳು, ಸದ್ಭಕ್ತಿಯೆ ಅಂಗ, ಸೌಮ್ಯಜ್ಞಾನವೆ ಪ್ರಾಣ, ಇಂತಪ್ಪ ಭಕ್ತಿಪ್ರಭಾವಮೂರ್ತಿಯಾದ ವೃಷಭೇಶ್ವರನ ಸರ್ವದೇವತಾ ಸಾರೋದ್ಧಾರವೆಂತೆಂದೊಡೆ:—ಶೃಂಗಾಗ್ರದಲ್ಲಿ ತುಂಬುರು ನಾರದಾದಿಗಳು, ತನ್ಮಧ್ಯದಲ್ಲಿ ಅಜಹರಿಗಳು, ಶಿರದಲ್ಲಿ ಮೇರುಮಂದರಾದಿಗಳು, ಲಲಾಟ ದಲ್ಲಿ ವೀರಕ ವೀರಭದ್ರಾದಿಗಳು, ಕರ್ಣಂಗಳಲ್ಲಿ ರುದ್ರಾದಿಗಳು, ನೇತ್ರಂಗ ಳಲ್ಲಿ ಶಶಿರವಿಗಳು, ನಾಸಾಪುಟಂಗಳಲ್ಲಿ ವಾಯುಪುರುಷ ಭೂದೇವತೆಯರು, ಮುಖದಲ್ಲಿ ಮಹಾಗಣಂಗಳು, ದಂತಂಗಳಲ್ಲಿ ಭೃಂಗೀಶ್ವರಾದಿ ನಿರ್ಮಾಯಾ ಗಣಂಗಳು, ಜಿಹ್ವೆಯಲ್ಲಿ ಮಂತ್ರಮೂರ್ತಿಗಳು, ಹುಂಕಾರರವದಲ್ಲಿ ನಾ ದಮೂರ್ತಿಗಳು, ಕಂಠದಲ್ಲಿ ಭುವನಭವನೇಶ್ವರರು, ಹಿಣಿಲಲ್ಲಿ ಪ್ರಮಥ ಗ ಣಾಧೀಶ್ವರರು, ಬೆನ್ನಸುಳಿಯಲ್ಲಿ ಉಮಾಮಹೇಶ್ವರರು, ಬಾಲ ದಂಡ ರೋ ಮಂಗಳಲ್ಲಿ ಸಕಲ ದೇವಾದಿದೇವರ್ಕಗಳು, ಪೃಷ್ಠದಲ್ಲಿ ಯಕ್ಷ ರಾಕ್ಷಸಾದಿ ಗಳು, ವೃಷಣದಲ್ಲಿ ಪುಣ್ಯತೀರ್ಥಮಹಾಪುರುಷರು, ಗುಹ್ಯದಲ್ಲಿ ಗುಹ್ಯಕಾದಿ ಗಳು, ನಾಭಿಯಲ್ಲಿ ಸಿದ್ಧವಿದ್ಯಾಧರರು, ಗರ್ಭದಲ್ಲಿ ಮನುಮುನಿಗಳು, ರೋ ಮಂಗಳಲ್ಲಿ, ಚರಾಚರ ಜೀವರಾಶಿಗಳು, ಜಾನುಜಂಘೆಯಲ್ಲಿ ಗ್ರಹರಾಶಿ ತಾ ರಾಪಥಂಗಳು, ಚರಣಂಗಳಲ್ಲಿ ಚತುರ್ಯುಗ ಚತುರ್ವೇದ ಚತುಃಪಾದ ಚತುಃಫಲಂಗಳು, ಅಂಗದಲ್ಲಿ ಅನಂತದಿವ್ಯಕ್ಷೇತ್ರಂಗಳು, ಪ್ರಾಣದಲ್ಲಿ ಪರ ಮ ತೇಜೋಲಿಂಗಂಗಳಿಹವು. ಇಂತಪ್ಪ ಸರ್ವದೇವತಾಧಾರವಪ್ಪ ವೃಷ ಭೇಶ್ವರನಿಂದಾದ ಸೃಷ್ಟಿಯ ಕ್ರಮವೆಂತೆಂದೊಡೆ:—ಗೋಮಯ ಗೋಮೂ

ತ್ರದಿಂ ಪೃಥ್ವೀಜಲಂಗಳು, ತೇಜಸ್ಸಿನಿಂದ ಅಗ್ನಿ,ಉಛ್ವಾಸ ನಿಶ್ವಾಸದಿಂ ವಾಯು, ಶಬ್ದದಿಂದಾಕಾಶ, ಕಂಗಳ ಕಾಂತಿಯಿಂ ರವಿಶಶಿಗಳು, ಬುದ್ಧಿಪ್ರಭಾವದಿಂದಾತ್ಮನೆಂಬ ಅಷ್ಟತನುಗುಣಗಳುದಯವಾಗಿ ಜಗತ್ಸಚರಾಚರಂಗಳಾದುವು. ಇಂತೀ ಸಕಲಜಗದಾಧಾರ ರಕ್ಷಣ ಕರ್ತುವಪ್ಪ ವೃಷಭೇಶ್ವರನ ಅಲಂಕೃತೋಪಕರಣಂಗಳಾವಾವೆಂದೊಡೆ:— ಜ್ಞಾನಧ್ಯಾನಂಗಳೆ ಕೋಡಣಸುಗಳು, ಮಹಾನಾದ ಸುನಾದವೆ ಕಿವಿಯ ಚಮರಿ, ಶಿವಕೀರ್ತನಪ್ರಭಾಮಂಡಲವೆ ಕನ್ನಡಿ, ಅಣಿಮಾದ್ಯೈಶ್ವರ್ಯವೆ ಮುಕುರಂಬ, ಸಮತೆಯೆ ವಾಘೆ, ವಿಶ್ವಾಸಶ್ರದ್ಧೆಯೆ ಕೊರಳದಂಡೆ, ಸತ್ಯಫಲಭಾಷೆಯೆ ಕೊರಳ ಘಂಟೆ, ವೇದಾದಿ ಉಗ್ಘಡಣೆಯೆ ಉರದ ಗೆಜ್ಜೆಹಾರದ ಧ್ವನಿ, ಪ್ರಣವೋಚ್ಚರಣೆಯೆ ಅಂದುಗೆರವ, ದಯವೆ ಕಿಂಕಿಣಿದೊಡರು, ಪಂಚವರ್ಣ ಪ್ರಭಾಪುಂಜವೆ ಅಲ್ಲಣ,ಸರ್ವಕಲಾರಸಿಕತ್ವವೆ ಬಿಗಿವು, ಪರಮವೈರಾಗ್ಯವೆ ಅಂಕಣಿ,ನಿತ್ಯವೆ ಕರಿಕೆ, ಇಂತೀ ಸರ್ವಲಕ್ಷಣ ಸಂಪನ್ನನಾಗೊಪ್ಪುವ ವೃಷಭೇಶ್ವರನ ಮುಖವೆ ಗೋಮುಖ, ಬಿಂದುವೆ ಪೀಠ, ಹುಂಕಾರನಾದವೆ ಶಿಖಾಗ್ರದ ತೇಜೋಮಯಲಿಂಗ, ಇಂತೀನಾದಬಿಂದು ಸಂಯುಕ್ತವಾದುದೆ ಶಿವಲಿಂಗ, ಆ ಶಿವಲಿಂಗವು ವೃಷಭೇಶ್ವರನ ಸಮ್ಮುಖದಲ್ಲಿ ಅಗಲದಿಪ್ಪ ಕಾರಣ, ಲಿಂಗಾವಲೋಕನ ದರ್ಶನ ಕಾಂಕ್ಷೆಯುಳ್ಳವರಿಗೆ ವೃಷಭ ಪುರುಷನ ಶೃಂಗಮಧ್ಯಾವಲೋಕನವಿಲ್ಲದಿರಲು ಆ ದರುಶನ ಸ್ಪರುಶನ ನಿಷ್ಫಲ. ಅಂತಲ್ಲದೆ ಲಿಂಗಧಾರಣಸಂಪನ್ನರಿಗಾದೊಡು, ವೃಷಭಲಿಂಗ ತದ್ಭಾವವಾದ ಬಸವಲಿಂಗವೆಂಬ ಪರಮಮಂತ್ರೋಚ್ಚರಣವಿಲ್ಲದಿರಲಾ ದರ್ಶನಸ್ಪರುಶನ ಧಾರಣಾದಿಗಳು ನಿಷ್ಫಲ. ಅದುಕಾರಣ ಬಸವಲಿಂಗನಾಮೋಚ್ಚರಣ ಜಪಕ್ರಿಯಾಲಕ್ಷಣವೆಂತೆಂದೊಡೆ:— ಓಂ ಹ್ರಂ ಶುದ್ಧಗುರು ಬಸವ, ಓಂ ಹ್ರಿಂ ನಮಶ್ಶಿವಾಯ ಗುರುವಿನ ಗುರುಬಸವ, ಓಂ ಹ್ರುಂ ಸಿದ್ಧಗುರು ಬಸವ, ಓಂ ಹ್ರೇಂ ನಮಶ್ಶಿವಾಯ ಪರಾಪರಬಸವ, ಓಂ ಹ್ರೋಂ ಪ್ರಸಿದ್ಧಗುರುಬಸವ, ಓಂ ಹೈಂ ಅ.ಉ.ಮ ಚರಕ್ಕೆ ಚರಾಚರಬಸವ, ಓಂ ಹ್ರೌಂ ಮಹಾಪ್ರಸಿದ್ಧಗುರುಬಸವ, ಓಂ ಹ್ರಃ ಬಸವ ಪವಿತ್ರಪಾವನ ಪಾವನ ಬಸವ, ಎಂಬ

ಅಷ್ಟಾಂಗನ್ಯಾಸ ಚತುಃ ಸಾರಾಯಮಂತ್ರವನುಚ್ಚರಿಸಲು, ಸರ್ವಸಿದ್ಧಿ ಕರ ಮಾಡ ಅಷ್ಟೋತ್ತರ ವೃಷಭೋದ್ಧರಣೆಯ ಸಂಬಂಧ ಸಮಾಪ್ತ ಮಂಗಳಮಹಾ.

---

ಶ್ರೀಗುರುಭ್ಯೋನಮಃ.

ನ ವ ಚ ಕ್ರೋ ದ್ಧ ರ ಣೆ.

ಗುಪ್ತದಲ್ಲಿ ಉದ್ಧಾರಚಕ್ರಮಧಿಸಿ ಪೃಥ್ವಿಯೆಂಬ ಮಹಾಭೂತ, ಆ ಭೂತ ಪೀತವರ್ಣ, ಚತುಃ ಕೋಣ ಚೌದಳ ಪದ್ಮ, ಆ ಪದ್ಮಸುವರ್ಣಛಾಯ, ಆ ದಳದಲಿ, ವ ಶ ಷ ಸ ಎಂಬ ನಾಲ್ಕಕ್ಷರ, ಆ ಕರ್ಣಿಕಾಮಧ್ಯದಲ್ಲಿ ನಕಾರವೆಂಬ ಬೀಜಾಕ್ಷರ, ಆ ನಕಾರ ಪೀತವರ್ಣ, ಅಲ್ಲಿ ಪೆಣ್ದುಂಬಿನಾದ, ಅಲ್ಲಿ ಆಚಾರಲಿಂಗ, ಅಲ್ಲಿ ಪೀತವರ್ಣವನುಳ್ಳ ಸದ್ಯೋಜಾತಮುಖ, ಪ್ರತಿಷ್ಠಾಕಲಾಪರ್ಯಾಯನಾಮವನುಳ್ಳ ಕ್ರಿಯಾಶಕ್ತಿ, ಆ ಶಕ್ತಿಪೀತವರ್ಣ, ಕರ್ಮಸದಾಖ್ಯ ಅನಾದಿಯೆಂಬ ಸಂಜ್ಞೆ, ಪೂರ್ವದಿಕ್ಕು, ಋಗ್ವೇದವನುಚ್ಚರಿಸುತ್ತ ಸುಚಿತ್ತವೆಂಬ ಹಸ್ತದಿಂದ, ಸುಗಂಧದ್ರವ್ಯವನ್ನು ಶ್ರದ್ಧಾಭಕ್ತಿಯಿಂದ ಘ್ರಾಣವೆಂಬ ಮುಖಕ್ಕೆ ಅರ್ಪಿಸುವಳಾಶಕ್ತಿ, ಬ್ರಹ್ಮಪೂಜಾರಿ, ಆಶಕ್ತಿ ಢಾಕಿಣಿ, ಭವಗಣೇಶನಧಿದೇವತೆ; ಇಂತಿವೆಲ್ಲಕ್ಕೂ ಮಾತೃಸ್ಥಾನವಾಗಿಹುದು ನಕಾರವೆಂಬ ಬೀಜಾಕ್ಷರ ಪ್ರಣವ, ತಾರಕಾಕೃತಿಯಲ್ಲಿಹುದು. ಓಂ ಓಂ ಓಂ ನಾಂ ನಾಂ ನಾಂ ಎಂಬ ಬ್ರಹ್ಮನಾದಮಂತ್ರಮೂರ್ತಿಪ್ರಣವಕ್ಕೆ ನಮಸ್ಕಾರವು. ಇದು ಭಕ್ತಿಸ್ಥಲ||೧||

ಅಲ್ಲಿಂದ ಮೇಲತ್ತ ಲಿಂಗಸ್ಥಾನದಲ್ಲಿ, ಸ್ವಾಧಿಷ್ಠಾನಚಕ್ರ, ಅಪ್ಪು ಎಂಬ ಮಹಾಭೂತ, ಆ ಭೂತ ಶ್ವೇತವರ್ಣ, ಧನುರ್ಗತಿ ಷಡ್ದಳಪದ್ಮ, ಆ ಪದ್ಮ ಶ್ವೇತವರ್ಣ, ಆ ದಳದಲ್ಲಿ ಬ ಭ ಮ ಯ ರ ಲ ಎಂಬ ಆರು ಅಕ್ಷರ, ಆ ಕರ್ಣಿಕಾ ಮಧ್ಯದಲ್ಲಿ ಮಕಾರ ವೆಂಬ ಬೀಜಾಕ್ಷರ, ಆ ಮಕಾರ ಶ್ವೇತವರ್ಣ, ಅಲ್ಲಿ ವೀಣಾನಾದ, ಅಲ್ಲಿ ಗುರುಲಿಂಗ, ಆ ಲಿಂಗ ಶ್ವೇತವರ್ಣ, ಶ್ವೇತವರ್ಣವನುಳ್ಳ ವಾಮದೇವಮುಖ, ನಿವೃತ್ತಿಕಲಾಪರ್ಯಾಯನಾಮವನುಳ್ಳ

ಜ್ಞಾನಶಕ್ತಿ, ಆ ಶಕ್ತಿ ಶ್ವೇತವರ್ಣ, ಕರ್ತೃಸದಾಖ್ಯ ಕ್ಷೇತ್ರವೆಂಬ ಸಂಜ್ಞೆ, ಪಶ್ಚಿಮದಿಕ್ಕು, ಯಜುರ್ವೇದವನುಚ್ಚರಿಸುತ್ತಾ ಸುಬುದ್ಧಿಯೆಂಬ ಹಸ್ತದಿಂದ, ಶುಚಿರಸವನ್ನು ನೈಷ್ಠಿಕಾ ಭಕ್ತಿಯಿಂದ ಜಿಹ್ವೆಯೆಂಬ ಮುಖಕ್ಕೆ ಅರ್ಪಿಸುವಳಾಶಕ್ತಿ, ವಿಷ್ಣುಪೂಜಾರಿ, ಆ ಶಕ್ತಿಕಾಮಿನಿ, ಮೃಡನಧಿದೇವತೆ, ಇಂತಿವೆಲ್ಲಕ್ಕೂ ಮಾತೃಸ್ಥಾನವಾಗಿಹುದು ಮಕಾರವೆಂಬ ಬೀಜಾಕ್ಷರ ಪ್ರಣವ. ದಂಡಕಾಕೃತಿಯಲ್ಲಿಹುದು, ಓಂ ಓಂ ಓಂ ಮಾಂ ಮಾಂ ಮಾಂ ಎಂಬ ಬ್ರಹ್ಮನಾದಮಂತ್ರಮೂರ್ತಿಪ್ರಣವಕ್ಕೆ ನಮಸ್ಕಾರವು. ಇದು ಮಹೇಶ್ವರಸ್ಥಲ||೨||

ಅಲ್ಲಿಂದ ಮೇಲತ್ತ ನಾಭಿಸ್ಥಾನದಲ್ಲಿ ಮಣಿ ಪೂರಕಚಕ್ರ, ಅಗ್ನಿ ಎಂಬ ಮಹಾಭೂತ, ಆ ಭೂತ ರಕ್ತವರ್ಣ, ತ್ರಿಕೋಣ ದಶದಳಪದ್ಮ, ಆ ಪದ್ಮ ಕೃಷ್ಣವರ್ಣ, ಆ ದಳದಲ್ಲಿ ಡ ಢ ಣ ತ ಥ ದ ಧ ನ ಪ ಫ ಎಂಬ ಹತ್ತು ಅಕ್ಷರ, ಆ ಕರ್ಣಿಕಾಮಧ್ಯದಲ್ಲಿ ಶಿಕಾರವೆಂಬ ಬೀಜಾಕ್ಷರ. ಆ ಶಿಕಾರ ನೀಲವರ್ಣ, ಅಲ್ಲಿ ಘಂಟಾನಾದ, ಅಲ್ಲಿ ಶಿವಲಿಂಗ, ಕಪ್ಪುವರ್ಣವನುಳ್ಳ ಅಘೋರಮುಖ, ಕಾಂತಿಕಲಾ. ಪರ್ಯಾಯನಾಮವನುಳ್ಳ ಇಚ್ಛಾಶಕ್ತಿ, ಆ ಶಕ್ತಿ ಕಪ್ಪುವರ್ಣ, ಮೂರ್ತಿಸದಾಖ್ಯ ಶರೀರವೆಂಬ ಸಂಜ್ಞೆ, ಉತ್ತರದಿಕ್ಕು ಸಾಮವೇದವನುಚ್ಚರಿಸುತ್ತಾ, ನಿರಹಂಕಾರವೆಂಬ ಹಸ್ತದಿಂದ, ಸುಸ್ವರೂಪವನ್ನು ಸಾವಧಾನಭಕ್ತಿಯಿಂದ ನೇತ್ರವೆಂಬ ಮುಖಕ್ಕೆ ಅರ್ಪಿಸುವಳಾಶಕ್ತಿ,ರುದ್ರಪೂಜಾರಿ, ಆ ಶಕ್ತಿಶಾಕಿನಿ, ಈಶ್ವರನಧಿದೇವತೆ, ಇಂತಿವೆಲ್ಲಕ್ಕೂ ಮಾತೃಸ್ಥಾನವಾಗಿಹುದು ಆ ಶಿಕಾರವೆಂಬ ಬೀಜಾಕ್ಷರ ಪ್ರಣವ, ಅದು ಕುಂಡಲಾಕೃತಿಯಲ್ಲಿಹುದು; ಓಂ ಓಂ ಓಂ ಶಿಂ ಶಿಂ ಶಿಂ ಎಂಬ ಬ್ರಹ್ಮನಾದಮಂತ್ರಮೂರ್ತಿ ಪ್ರಣವಕ್ಕೆ ನಮಸ್ಕಾರವು. ಇದು ಪ್ರಸಾದಿಸ್ಥಲ||೩||

ಅಲ್ಲಿಂದ ಮೇಲತ್ತ ಹೃದಯಸ್ಥಾನದಲ್ಲಿ ಅನಾಹತಚಕ್ರ, ವಾಯುವೆಂಬ ಮಹಾಭೂತ, ಆ ಭೂತ ಮಂಜಿಷ್ಠಾವರ್ಣ, ಷಟ್ಕೋಣ,ದ್ವಾದಶದಳ ಪದ್ಮ, ಆ ಪದ್ಮ ಕುಂಕುಮವರ್ಣ, ಆ ದಳದಲ್ಲಿ ಕ ಖ ಗ ಘ ಙ ಚ ಛ ಜ ಝ ಞ ಟ ಠ, ಎಂಬ ಹನ್ನೆರಡು ಅಕ್ಷರ, ಆ ಕರ್ಣಿಕಾ ಮಧ್ಯದಲ್ಲಿ ವಕಾರವೆಂಬ ಬೀಜಾಕ್ಷರ, ಈ ವಕಾರ ಮಂಜಿಷ್ಠವರ್ಣ, ಅಲ್ಲಿ ಭೇರೀನಾದ,

ಅಲ್ಲಿ ಚರಲಿಂಗ, ಮಂಜಿಷ್ಠ ವರ್ಣವನುಳ್ಳ ತತ್ಪುರುಷಮುಖ, ಕಾಂತಿ ಕಲಾಪರ್ಯಾಯ ನಾಮವನುಳ್ಳ ಆದಿಶಕ್ತಿ, ಆ ಶಕ್ತಿ ಮಂಜಿಷ್ಠವರ್ಣ, ಅಮೂರ್ತಿಸದಾಖ್ಯ ಗೂಢವೆಂಬಸಂಜ್ಞೆ, ದಕ್ಷಿಣದಿಕ್ಕು ಅಥರ್ವಣ ವೇದವನುಚ್ಚರಿಸುತ್ತಾ, ಸುಮನವೆಂಬ ಹಸ್ತದಿಂದ ಸುಸ್ಪರ್ಶವನ್ನು ಅನುಭಾವಭಕ್ತಿಯಿಂದ ತ್ವಕ್ಕೆಂಬ ಮುಖಕ್ಕೆ ಅರ್ಪಿಸುವಳಾಶಕ್ತಿ, ಈಶ್ವರ ಪೂಜಾರಿ, ಆ ಶಕ್ತಿ ಕಹಂಕಾಳಿ, ಭೀಮನಧಿದೇವತೆ,ಇಂತಿವೆಲ್ಲಕ್ಕೂ ಮಾತೃಸ್ಥಾನವಾಗಿಹುದು ವಕಾರವೆಂಬ ಬೀಜಾಕ್ಷರ ಪ್ರಣವ, ಅರ್ಧಚಂದ್ರಾಕೃತಿಯಲ್ಲಿಹುದು, ಓಂ ಓಂ ಓಂ ವಾಂ ವಾಂ ವಾಂ ಎಂಬ ಬ್ರಹ್ಮನಾದ ಮಂತ್ರಮೂರ್ತಿ ಪ್ರಣವಕ್ಕೆ ನಮಸ್ಕಾರವು. ಇದು ಪ್ರಾಣಲಿಂಗಿಸ್ಥಲ ||೪||

ಅಲ್ಲಿಂದ ಮೇಲತ್ತ ಕಂಠಸ್ಥಾನದಲ್ಲಿ ವಿಶುದ್ಧಿಚಕ್ರ, ಆಕಾಶವೆಂಬ ಮಹಾಭೂತ, ಆ ಭೂತಕೃಷ್ಣವರ್ಣ, ವರ್ತುಳಾಕಾರ ಷೋಡಶದಳಪದ್ಮ, ಆ ಪದ್ಮ ಸ್ಫಟಿಕವರ್ಣ, ಆ ದಳದಲ್ಲಿ ಅ ಆ ಇ ಈ ಉ ಊ ಋ ೠ ಌ ೡ ಏ ಐ ಓ ಔ ಅಂ ಅಃ ಎಂಬ ಹದಿನಾರು ಅಕ್ಷರ, ಆ ಕರ್ಣಿಕಾಮಧ್ಯದಲ್ಲಿ ಯಕಾರವೆಂಬ ಬೀಜಾಕ್ಷರ, ಆ ಯಕಾರ ಸ್ಫಟಿಕ ವರ್ಣ, ಅಲ್ಲಿ ಮೇಘಧ್ವನಿ, ಅಲ್ಲಿ ಪ್ರಸಾದಲಿಂಗ, ಆ ಲಿಂಗ ಸ್ಫಟಿಕವರ್ಣ, ಸ್ಫಟಿಕವರ್ಣವನುಳ್ಳ ಈಶಾನ್ಯಮುಖ, ಶಾಂತಿಕಲಾಪರ್ಯಾಯನಾಮವನುಳ್ಳ ಪರಶಕ್ತಿ, ಆ ಶಕ್ತಿ ಸ್ಫಟಿಕವರ್ಣ, ಶಿವಪದಾಖ್ಯ, ನಿರಾಮಯವೆಂಬ ಸಂಜ್ಞೆ, ಊರ್ಧ್ವದಿಕ್ಕು,ಗಾಯತ್ರೀ ವೇದವ ನುಚ್ಚರಿಸುತ್ತಾ ಸುಜ್ಞಾನವೆಂಬ ಹಸ್ತದಿಂದ, ಸುಶಬ್ದವನ್ನು ಆನಂದಭಕ್ತಿಯಿಂದ ಶ್ರೋತ್ರವೆಂಬ ಮುಖಕ್ಕೆ ಅರ್ಪಿಸುವಳಾಶಕ್ತಿ, ಸದಾಶಿವ ಪೂಜಾರಿ, ಆ ಶಕ್ತಿ ಪರಾಕಿನಿ, ಮಹಾದೇವನಧಿದೇವತೆ, ಇಂತಿವೆಲ್ಲಕ್ಕೂ ಮಾತೃಸ್ಥಾನವಾಗಿಹುದು ಯಕಾರವೆಂಬ ಬೀಜಾಕ್ಷರ ಪ್ರಣವ, ದರ್ಪಣಾಕೃತಿಯಲ್ಲಿಹುದು, ಓಂ ಓಂ ಓಂ ಯಂ ಯಂ ಯಂ ಎಂಬ ಬ್ರಹ್ಮನಾದ ಮಂತ್ರಮೂರ್ತಿ ಪ್ರಣವಕ್ಕೆ ನಮಸ್ಕಾರವು. ಇದುಶರಣಸ್ಥಲ || ೫ ||

ಅಲ್ಲಿಂದ ಮೇಲತ್ತ ಭ್ರೂಮಧ್ಯಸ್ಥಾನದಲ್ಲಿ, ಆಜ್ಞೇಯಚಕ್ರ, ಮಹದಾಕಾಶವೆಂಬ ಭೂತ, ಆ ಭೂತ ಮಹಾವರ್ಣ, ತಮುಪಾಕಾರ, ದ್ವಿದಳಪದ್ಮ,

ಆ ಪದ್ಮ ವನಂತ, ಮಂಜಿನವರ್ಣ, ಆ ದಳದಲ್ಲಿ ಹಂ ಸಂ ಎಂಬ ಎರಡು ಅಕ್ಷರ, ಆ ಕರ್ಣಿಕಾಮಧ್ಯದಲ್ಲಿ ಓಂಕಾರವೆಂಬ ಬೀಜಾಕ್ಷರ, ಆ ಓಂಕಾರ ಸಕಲಾಕ್ಷರಂಗಳ ಗರ್ಭೀಕರಿಸಿಕೊಂಡಿಹುದು, ನಾದ ಬಿಂದು ಕಳೆಗಳಿಗೆ ಆ ಶ್ರಯವಾಗಿಹುದು, ತತ್ಪದ ತ್ವಂಪದ ಅಸಿ ಪದವನೊಳಕೊಂಡಿಹುದು, ಅಲ್ಲಿ ಪ್ರಣವನಾದ, ಅಲ್ಲಿ ಮಹಾಲಿಂಗ, ಪಥಶರೀರವನುಳ್ಳ ಹೃದಯವೆಂ ಬ ಮುಖ, ಶಾಂತಾತೀತೋತ್ತುಂಗ ಕಲಾಪರ್ಯಾಯನಾಮವನುಳ್ಳ ಜಿಚ್ಛ ಕ್ತಿ, ಆ ಶಕ್ತಿ ಮಹಾಘನ,ಬೆಳಕಿನ ವರ್ಣ, ನಿರ್ಮಲಸದಾಖ್ಯ ನಿರಾಕುಲ ವೆಂಬ ಸಂಜ್ಞೆ, ಗಭೀರದಿಕ್ಕು, ಸದ್ಭಾವಹಸ್ತದಿಂದ ಸಕಲ ತೃಪ್ತಿದ್ರ ವ್ಯವನ್ನು ಹೃದಯವೆಂಬ ಮುಖಕ್ಕೆ ಅರ್ಪಿಸುವ ಆಶಕ್ತಿ, ಪರಶಿವ ಪೂಜಾರಿ; ಆ ಶಕ್ತಿ ಪರಾಕಿನಿ, ಮಹಾಗುರುವಧಿದೇವತೆ, ಯಿಂತಿವೆಲ್ಲಕ್ಕೂ ಮಾತೃ ಸ್ಥಾನವಾಗಿಹುದು ಆ ಓಂಕಾರವೆಂಬ ಬೀಜಾಕ್ಷರ ಪ್ರಣವ, ಜ್ಯೋತಿರಾಕೃತಿ ಯಲ್ಲಿಹುದು, ಓಂ ಓಂ ಓಂ ಓಂ ಓಂ ಓಂ ಎಂಬ ಬ್ರಹ್ಮನಾದ ಮಂತ್ರ ಮೂರ್ತಿ ಪ್ರಣವಕ್ಕೆ! ನಮಸ್ಕರವು. ಇದು ಐಕ್ಯಸ್ಥಲ||೭||

ಅಲ್ಲಿಂದ ಮೇಲತ್ತ ಬ್ರಹ್ಮಚಕ್ರ. ಸಹಸ್ರದಳಪದ್ಮ,ಆ ಪದ್ಮ ಮಹಾ ವರ್ಣ,ಆ ದಳದಲ್ಲಿ ಸಹಸ್ರಾಕ್ಷರ,ಅನಂತ ವೇದಂಗಳನೊಳಕೊಂಡಿಹುದು,ಆ ಕರ್ಣಿಕಾ ಮಧ್ಯದಲ್ಲಿ, ಬಕಾರಮಂತ್ರ, ಅಖಂಡಿತವಪ್ಪ ಪ್ರಣವನಾದ,ಅನಂ ತಕೋಟಿ ಸೂರ್ಯಪ್ರಕಾಶವನುಳ್ಳ, ನಿಷ್ಕಲಲಿಂಗ, ಅಕ್ಷರಾತ್ಮಕ, ಸುನಾದ, ಅನಾದಿಯೆಂಬ ಕಳೆ, ಅಗಮ್ಯಸದಾಖ್ಯ ಅಪ್ರಮಾಣವೆಂಬ ಸಂಜ್ಞೆ, ಅನಾದಿ ಮಯಶಕ್ತಿ, ನಿರಂಜನಶಕ್ತಿ, ಅವಿರಳದ್ರವ್ಯ, ಆಗಣಿತಪೂಜಾರಿ,ಇಂತಿವೆಲ್ಲಕ್ಕೂ ಮಾತೃಸ್ಥಾನವಾಗಿಹುದು ಪ್ರಣವಗೋಪ್ಯವಾದ ಬೀಜಾಕ್ಷರ, ಓಂಕಾರವೇ ಬ್ರಹ್ಮನಾದ ಮಂತ್ರ ಮೂರ್ತಿಯಾಗಿ ನಿರಾವಣ ನಿರಾಲಂಬ ನಿರಾವಯವ, ನಿರ್ಬಿಂದು, ಇಂತುನಿರಾವರಣಬಿಂದುವಿಗೆ ನಮಸ್ಕಾರವು.ಇದುಸಹಸ್ರಸ್ಥಲ ||

ಅಲ್ಲಿಂದ ಮೇಲತ್ತ ಮಸ್ತಕಾಗ್ರದಲ್ಲಿ ಶಿಖಿಚಕ್ರ, ತ್ರಿದಳಪದ್ಮ, ಆಪದ್ಮ ಜ್ಯೋತಿರ್ವರ್ಣ, ತ್ರ್ಯಕ್ಷರ, ನಿರ್ಜೀವಶಕ್ತಿ, ನಿರ್ಮಲ ಸದಾಖ್ಯ, ಅ ವಿರಳ ಗಂಭೀರ,ಕ್ಷಕಾರಮಂತ್ರ, ಕಾಲಾಗ್ನಿ ಪ್ರಕಾಶವನುಳ್ಳ ನಿಶ್ಶೂನ್ಯಲಿಂಗ,

ಮಹಾಲಿಂಗವೇ ಅಧಿದೇವತೆ, ಆ ಲಿಂಗದಲ್ಲಿ ದಿವ್ಯನಾದ, ಪರಿಪೂರ್ಣಶಕ್ತಿ, ಪರಮಾತ್ಮದ್ರವ್ಯ, ಲಿಂಗಸಂಜ್ಞೆ. ಇದು ಶಿಖಾಸ್ಥಲ || ೮ ||

ಅಲ್ಲಿಂದ ಮೇಲತ್ತ ಪಶ್ಚಿಮಚಕ್ರಕ್ಕೆ ಏಕದಳಪದ್ಮ, ಏಕಾಕ್ಷರ, ಹವಣಿಸಬಾರದ ತೇಜ, ಕುರುಹಿಡಬಾರದ ನಾದ, ನಿರುಪಮಶಕ್ತಿ, ಸರ್ವಾತ್ಮಕನೆಂಬ ನಿರಂಜನಲಿಂಗ, ಹಕಾರಮಂತ್ರ, ಕ್ಷರಾಕ್ಷರ, ನಿಶ್ಶಬ್ದವಾಗಿಹುದು, ಇದು ಪಶ್ಚಿಮಸ್ಥಲ || ೯ ||

ಇಂತಪ್ಪ ಬಸವನಪ್ರಿಯ ಕೂಡಲ ಚೆನ್ನಸಂಗಮನ ಭಕ್ತಿಗೆ ನಿತ್ಯರು ಮತ್ತಂ.

## ಮಂತ್ರಸ್ಥಲ.

ಕುಳಸಂಬಂಧ.—ಆಧಾರದಲ್ಲಿ ನಕಾರ, ಸ್ವಾಧಿಷ್ಠಾನದಲ್ಲಿ ಮಕಾರ, ಮಣಿಪೂರಕದಲ್ಲಿ ಶಿಕಾರ, ಅನಾಹತದಲ್ಲಿ ವಕಾರ, ವಿಶುದ್ಧಿಯಲ್ಲಿ ಯಕಾರ, ಆಗ್ನೇಯದಲ್ಲಿ ಓಂಕಾರ, ಬ್ರಹ್ಮರಂಧ್ರದಲ್ಲಿ ಅಕಾರ ಬಕಾರ ಬಕಾರ, ಶಿಖೆಯಲ್ಲಿ, ಉಕಾರ ಸಕಾರ ಕ್ಷಕಾರ, ಪಶ್ಚಿಮದಲ್ಲಿ, ಮಕಾರ ವಕಾರ ಹಕಾರ ಸಂಬಂಧವಾಗಿಹವು. ಇಂತೀ ಹದಿನೈಯ್ದು ಪ್ರಣವವು, ನವವಿಧ ಲಿಂಗಾಂಗ ಸ್ಥಳಂಗಳನೊಳಕೊಂಡು, ನಾದತ್ರಯ, ಬಿಂದುತ್ರಯ, ಕಳಾತ್ರಯ ಸ್ವರೂಪಿನಿಂ, ಲಿಂಗತ್ರಯ ಸಂಬಂಧವಾಗಿಹವು. ಮತ್ತಂ. ತಾರೆ ನಂ ಹ್ರಂ ಎಂಬ ಮೂರು ಆಧಾರದಲ್ಲಿ, ದಂಡೆ ಮಂ ಹ್ರಿಂ ಎಂಬ ಮೂರು ಸ್ವಾಧಿಷ್ಠಾನದಲ್ಲಿ, ಅ ಸ ಕ್ಷಂ ಎಂಬ ಈ ಮೂರು ಶಿಖೆಯಲ್ಲಿ ಸಂಬಂಧ, ಈ ಒಂಭತ್ತೂ ಬಿಂದುತ್ರಯಸ್ವರೂಪಿನಿಂ ಇಷ್ಟಲಿಂಗ ಸಂಬಂಧವಾಗಿಹವು. ಕುಂಡಲಿ ಶಿ ಹ್ರುಂ, ಎಂಬ ಮೂರು ಮಣಿಪೂರಕದಲ್ಲಿ, ಅರ್ಧಚಂದ್ರ ವ ಹ್ರೇಂ, ಎಂಬ ಮೂರು ಅನಾಹತದಲ್ಲಿ, ಮ ವ ಹ ಎಂಬ ಮೂರು. ಪಶ್ಚಿಮದಲ್ಲಿ ಸಂಬಂಧ. ಈ ಒಂಬತ್ತೂ ಪೂರ್ವೋಕ್ತ ಬಿಂದು ಸಹಿತ ಹತ್ತೂ ಕಳಾತ್ರಯಸ್ವರೂಪಿನಿಂ ಪ್ರಾಣಲಿಂಗ ಸಂಬಂಧವಾಗಿಹವು. ದರ್ಪಣ ಯ ಹ್ರೋಂ ಎಂಬ ಮೂರು ವಿಶುದ್ಧಿಯಲ್ಲಿ, ಜ್ಯೋತಿರಾಕೃತಿ, ಓಂ ಹ್ರಃ, ಎಂಬ ಮೂರು ಆಗ್ನೇಯದಲ್ಲಿ, ಅ ಬ ಬ ಎಂಬ ಮೂರು ಬ್ರಂಹ್ಮರಂಧ್ರದಲ್ಲಿ ಸಂಬಂಧ. ಈ ಒಂಭತ್ತೂ,

ಪೂರ್ವೋಕ್ತ ಬಿಂದು ಕಳೆ ಸಹಿತ ಹನ್ನೊಂದೂ ನಾದತ್ರಯ ಸ್ವರೂಪಿಸಿಂ, ಭಾವಲಿಂಗಸಂಬಂಧವಾಗಿಹವು. ಮತ್ತಂ. ನಕಾರದಲ್ಲಿ ನ ಮ ಶಿ ವ ಈ ನಾಲ್ಕು ಆಧಾರದಲ್ಲಿ, ಮಕಾರದಲ್ಲಿ ನಮಶಿವ ಈ ನಾಲ್ಕು ಸ್ವಾಧಿಷ್ಠಾನದಲ್ಲಿ, ಇವರಲ್ಲಿ ಉಳಿದ ಯ ಓಂ ಯ ಓಂ, ಈ ನಾಲ್ಕೂಕಿಶಿಖಿಯಲ್ಲಿ ಸಂಬಂಧ. ಈ ಹನ್ನೆರಡುಪ್ರಣವಸ್ವರೂಪವಾದ ಭಕ್ತನಂಗವಾರು, ಆಚಾರಲಿಂಗಸ್ಥಲವಾರು, ಶ್ರದ್ಧಾಭಕ್ತಿಯಾರು, ಮಹೇಶನಂಗವಾರು, ಗುರುಲಿಂಗಸ್ಥಲವಾರು, ನೈಷ್ಠಿಕಾಭಕ್ತಿಯಾರು; ಈ ೩೬ ಬಿಂದುತ್ರಯ ಸ್ವರೂಪಿಸಿಂ ಇಷ್ಟಲಿಂಗ ಸಂಬಂಧವಾಗಿಹವು. ಶಿಕಾರದಲ್ಲಿ ನಮಶಿವ ಈ ನಾಲ್ಕೂ ಮಣಿಪೂರಕದಲ್ಲಿ, ವಕಾರದಲ್ಲಿ ನಮಶಿವ ಈನಾಲ್ಕೂ ಅನಾಹತದಲ್ಲಿ, ಇವರಲ್ಲಿ ಉಳಿದ ಯ ಓಂ ಯ ಓಂ, ಈ ನಾಲ್ಕು ಪಶ್ಚಿಮದಲ್ಲಿ ಸಂಬಂಧ. ಈ ಹನ್ನೆರಡುಪ್ರಣವಸ್ವರೂಪವಾದ ಅಂಗವಾರು, ಶಿವಲಿಂಗಸ್ಥಲವಾರು, ಸಾವಧಾನಭಕ್ತಿಯಾರು, ಪ್ರಾಣಲಿಂಗಿ ಅಂಗವಾರು, ಜಂಗಮಲಿಂಗಸ್ಥಲವಾರು, ಅನುಭಾವ ಭಕ್ತಿಯಾರು, ಈ ೩೬ ಕಳಾತ್ರಯಸ್ವರೂಪಿಸಿಂ ಪ್ರಾಣಲಿಂಗಸಂಬಂಧವಾಗಿಹವು. ಯಕಾರದಲ್ಲಿ ನಮಶಿವ, ಈ ನಾಲ್ಕೂ ವಿಶುದ್ಧಿಯಲ್ಲಿ, ಓಂಕಾರದಲ್ಲಿ ನಮಶಿವ ಈನಾಲ್ಕು ಆಗ್ನಿಯಲ್ಲಿ, ಇವರಲ್ಲಿ ಉಳಿದ ಯ ಓಂ ಯ ಓಂ, ಈ ನಾಲ್ಕೂ ಬ್ರಹ್ಮರಂಧ್ರದಲ್ಲಿ ಸಂಬಂಧ. ಯೀ ೧೨ ಪ್ರಣವಸ್ವರೂಪವಾದ ಶರಣನಂಗವಾರು, ಪ್ರಸಾದಲಿಂಗಸ್ಥಳವಾರು, ಆನಂದಭಕ್ತಿಯಾರು, ಐಕ್ಯನಂಗವಾರು, ಮಹಾಲಿಂಗಸ್ಥಲವಾರು, ಸಮರಸ ಭಕ್ತಿಯಾರು, ಈ ೩೬ ನಾದತ್ರಯ ಸ್ವರೂಪಿಸಿಂ ಭಾವಲಿಂಗ ಸಂಬಥವಾಗಿಹವು. ಇನು| ಪಿಂಡಜ್ಞಾನ, ಸಂಸಾರಹೇಯ, ಗುರುಕರುಣೆ, ದೀಕ್ಷಾಗುರು, ಶಿಕ್ಷಾಗುರು, ಮೋಕ್ಷಗುರು, ಈ ಆರೂ, ಲಿಂಗಧಾರಣ,ಕ್ರಿಯಾಲಿಂಗ, ಭಾವಲಿಂಗ, ಜ್ಞಾನಲಿಂಗ, ಈ ನಾಲ್ಕೂ ವಿಭೂತಿ ರುದ್ರಾಕ್ಷ, ಈ ೨. ಇಂತೀ ಸ್ಥಲಸಹ ೧೩! ಆಧಾರದಲ್ಲಿ, ಮಹೇಶ್ವರ ಕ್ರಿಯಾಗಮ, ಭಾವಾಗಮ, ಜ್ಞಾನಾಗಮ, ಲಿಂಗನಿಷ್ಠೆ, ಸಕಾಯ, ಅಕಾಯ, ಪರಕಾಯ, ಈ ನಾಲ್ಕು, ಪೂರ್ವಾಶ್ರಯ ನಿರಸನ, ವಾಗದ್ವೈತನಿರಸನ, ಹಂಸನಿರಸನ, ಅಷ್ಟತನುಮೂರ್ತಿನಿರಸನ, ಇಂತೀಸ್ಥಲಸಹ ೧೨ ಸ್ವಾಧಿಷ್ಠಾನದಲ್ಲಿ, ಸರ್ವಗತನಿರಸನ, ಧರ್ಮಾ

ಚಾರ, ಭಾವಾಚಾರ, ಜ್ಞಾನಾಚಾರ, ಶಿವಜಗನ್ಮಯ, ಭಕ್ತದೇಹಿಕಲಿಂಗ, ಈ ೬, ಪಂಚಾಕ್ಷರಿ, ಸ್ವಯ, ಚರ, ಪರ, ಇವು ೪, ಭಕ್ತ ಉಭಯ ತ್ರಿವಿಧ ಸಂಪತ್ತು, ಚತುರ್ವಿಧಸಾರಾಯ, ಉಪಾಧಿ, ನಿರುಪಾಧಿ ಸಹಜಮಾಟ ಇವು, ಇಂತೀಸ್ಥಲಸಹ ೧೪ ಶಿಖೆಯಲ್ಲಿ ಸಂಬಂಧ, ೪೨ ಬಿಂದು, ಪರಬಿಂದು, ಅಪರಬಿಂದು ಸ್ವರೂಪವಾದ,ಸ ಕ್ಷ ಎಂಬ ಅಕ್ಷರಾತ್ಮಕವಾಗಿಹವು.ಪ್ರಸಾದಿ, ಕಾಯಾನುಗ್ರಹ, ಇಂದ್ರಿಯಾನುಗ್ರಹ, ಪ್ರಾಣದನುಗ್ರಹ, ಇವುನಾಲ್ಕು, ಗುರುಮಹಿಮೆ, ಲಿಂಗಮಹಿಮೆ, ಜಂಗಮಮಹಿಮೆ, ಭಕ್ತಮಹಿಮೆ, ಇವು ನಾಲ್ಕು ಶರಣಮಹಿಮೆ, ಕಾಯಾರ್ಪಿತ, ಕರಣಾರ್ಪಿತ, ಭಾವಾರ್ಪಿತ, ಇವು ನಾಲ್ಕು ಸ್ಥಲಸಹ. ೧೨ ಮಣಿಪೂರಕದಲ್ಲಿ. ಪ್ರಾಣಲಿಂಗಿ ಜೀವಾತ್ಮ, ಅಂತರಾತ್ಮ, ಪರಮಾತ್ಮ ಈ ನಾಲ್ಕು, ಪ್ರಾಣಲಿಂಗಾರ್ಜನೆ, ಶಿವಯೋಗ ಸಮಾಧಿ, ನಿರ್ದೇಹಾಗಮ, ನಿರ್ಭಾವಾಗಮ, ನಿಷ್ಠಾಗಮ, ಇವು ೫, ಲಿಂಗ ನಿಜ, ಆದಿಪ್ರಸಾದಿ, ಅಂತ್ಯಪ್ರಸಾದಿ, ಶೈವಪ್ರಸಾದಿ, ಇವುನಾಲ್ಕು ಇಂತಿ ಸ್ಥಲಸಹ ೧೩ ಅನಾಹತದಲ್ಲಿ, ಅಂಗ, ಲಿಂಗ, ದೀಕ್ಷಾಪಾದೋದಕ, ಜ್ಞಾನ ಪಾದೋದಕ, ಇವು ನಾಲ್ಕು,ಪ್ರಸಾದ ಮಹಿಮೆ ಇವೂ, ಶಿಷ್ಯ,ಶುಶ್ರೂಷಾ, ಶೈವ, ಇವು ೩, ಇಂತಿ ಸ್ಥಲಸಹ ಒಂಭತ್ತು, ವಿಶುದ್ಧಿಯಲ್ಲಿ, ಇವು ೩೩ ಖಳೆ, ಪರಖಳೆ ಸ್ವರೂಪವಾದ, ವವಹ, ಎಂಬಕ್ಷರಾತ್ಮಕವಾಗಿಹವು. ಶರಣಪ್ರಿಯ, ನಿಷ್ಪ್ರೀತಿ ಭಾವ ನಿಷ್ಪ್ರೀತಿ ಜ್ಞಾನ ನಿಷ್ಪ್ರೀತಿ,ಇವು೪,ಕಾಮನಿರಸನ,ಈವೊಂದೂ,ನಿರ್ದೇಶ, ಪಿಂಡಾಕಾಶ, ಬಿಂದ್ವಾಕಾಶ, ಮಹದಾಕಾಶ, ಇವುನಾಲ್ಕು, ಇಂತೀ ಸ್ಥಲಸಹ, ಇವು ೯ ಪ್ರಸಾದಿಯಲ್ಲಿ, ಐಕ್ಯ ಕೊಂಡುದು ಪ್ರಸಾದ ನಿಂದುದು ಓಗರ,ಚರಾಚರನಾಸ್ತಿ, ಇವು ನಾಲ್ಕು, ಸರ್ವಾಚಾರ ಸಂಪತ್ತು, ಈ ಒಂದು,ಭಾಂಡ,ಭಾಜನ, ಅಂಗಲೇಪನ, ಈ ೩ ಇಂತಿಸ್ಥಲಸಹ ಆಗ್ನೇಯದಲ್ಲಿ;ಏಕಭಾಜನ, ಈ ೧ ಸಹಭೋಜನಾನ್ವಯ,ಪರವರಿಯದ ಭಾವ, ಭಾವನಷ್ಟ, ಜ್ಞಾನಶೂನ್ಯ ಇವು ೫ ಶೀಲಸಂಪಾದನೆ, ಕ್ರಿಯಾಪ್ರಕಾಶ, ಭಾವ ಪ್ರಕಾಶ, ಜ್ಞಾನಪ್ರಕಾಶ, ಇವು ನಾಲ್ಕುಸ್ಥಲವಹ ೯ಬ್ರಹ್ಮರಂಧ್ರದಲ್ಲಿ ಸಂಬಧ, ಈ ೨೬ನಾದ, ಪರನಾದ ಅಪರನಾದ ಸ್ವರೂಪಿಸಿಂ ಅ ಬ ಬ

ಎಂಬಕ್ಷರಾಕ್ಷರವಾಗಿಹವು. ಈ ಸ್ಥಲಸಂಬಧವನು ಅನಾದಿ ಭಕ್ತನೊಡಲಾದ ಕೆಲಕೇಲವುದ್ಧರಣೆಗಳಲ್ಲಿ ಸಂಬಂಧಿಸುವುದು. ನವಚಕ್ರೋದ್ಧರಣೆಯ ಸಂಬಂಧ ಸಮಾಪ್ತ ಮಂಗಳಮಹಾ

---

ಗುರುಭ್ಯೋನಮಃ.

## ತ ತ್ವ ಪ ಂ ಚೀ ಕ ರ ಣೋ ದ್ಧ ರ ಣೆ.

ಇಂತಪ್ಪ ನವಚಕ್ರಭೇದ ಪರೀಕ್ಷಿತನಾದ ಶಿವಯೋಗಿಯ, ಅಂಗಸಂಬಂಧವಾದ ತತ್ವಪಂಚೀಕರಣೋತ್ಪತ್ತಿನಿರ್ದೇಶವೆಂತೆಂದೊಡೆ:— ಅಪ್ರತಿಮನಿತ್ಯ, ನಿರಂಜನ, ಪರಶಿವನ ಸ್ವಲೀಲಾನಂದದ ನೆನಹೆ ಪರಶಕ್ತಿ, ಆ ಪರಶಕ್ತಿ ಸಮೇತವಾಗಿ ನಾದಮೂರ್ತಿಯಾಗಿ ತೋರ್ಪುದೆ ಅನುಪಮಮಹಾಘನಲಿಂಗ, ಆ ಲಿಂಗದ ಚೈತನ್ಯಪ್ರಭಾವವೆ ಮೂರ್ತಿಗೊಂಡು ಸರ್ವಲಕ್ಷಣಸಂಪನ್ನನೆನಿಪ ಸದಾಶಿವನಾದಂ. ಆ ಸದಾಶಿವನ ಸ್ವಲೀಲಾರ್ಥವಾಗಿ ಗೋಪ್ಯಮುಖದಿಂದಾತ್ಮನುದಯವಾದಕೂಡಲೆ ಪಂಚವಕ್ತ್ರದಿಂ, ಪಂಚಭೂತಂಗಳುದಯಿಸಿ ತತ್ವಾತ್ಮಕಶರೀರವಾಯಿತು. ಇಂತೀ ಶರೀರಸಂಬಂಧವಾದ ಆತ್ಮತತ್ವಭೂತಂಗಳಿಗೆ ವಿವರ:—

ಆಕಾಶದಂಶ;— ಆತ್ಮನಲ್ಲಿ ಭಾವ, ಆಕಾಶದಲ್ಲಿ ಜ್ಞಾತೃ, ವಾಯುವಿನಲ್ಲಿ ಮನ, ಅಗ್ನಿಯಲ್ಲಿ ಬುದ್ಧಿ, ಅಪ್ಪುವಿನಲ್ಲಿ ಚಿತ್ತ, ಪೃಥ್ವಿಯಲ್ಲಿ ಅಹಂಕಾರ. ಇಂತಿವು ಆಕಾಶದಂಶಗಳು.

ವಾಯುವಿನ ಅಂಶ:— ಆತ್ಮನಲ್ಲಿ ಚಿತ್ತು, ಆಕಾಶದಲ್ಲಿ ಸಮಾನ, ವಾಯುವಿನಲ್ಲಿ ವ್ಯಾನ, ಅಗ್ನಿಯಲ್ಲಿ ಉದಾನ, ವಿಷ್ಣುವಿನಲ್ಲಿ ಅಪಾನ, ಪೃಥ್ವಿಯಲ್ಲಿ ಪ್ರಾಣ, ಇಂತಿವು ವಾಯುವಿನ ಅಂಶಗಳು.

ಅಗ್ನ್ಯಂಶ— ಆತ್ಮನಲ್ಲಿ ಹೃದಯ, ಆಕಾಶದಲ್ಲಿ ಶ್ರೋತ್ರ, ವಾಯುವಿನಲ್ಲಿ ತ್ವಕ್ಕು, ಅಗ್ನಿಯಲ್ಲಿ ನೇತ್ರ, ಅಪ್ಪುವಿನಲ್ಲಿ ಜಿಹ್ವೆ, ಪೃಥ್ವಿಯಲ್ಲಿ ಘ್ರಾಣ; ಇಂತಿವು ಅಗ್ನಿಯ ಅಂಶಗಳು.

ಅಪ್ಪುವಿನ ಅಂಶ:— ಆತ್ಮನಲ್ಲಿ ತೃಪ್ತಿ, ಆಕಾಶದಲ್ಲಿ ಶಬ್ದ, ವಾಯುವಿನಲ್ಲಿ ಸ್ಪರ್ಶ, ಅಗ್ನಿಯಲ್ಲಿ ರೂಪು, ಅಪ್ಪುವಿನಲ್ಲಿ ರಸ, ಪೃಥ್ವಿಯಲ್ಲಿ ಗಂಧ, ಇಂತಿವು ಅಪ್ಪುವಿನ ಅಂಶಗಳು.

ಪೃಥ್ವಿಯ ಅಂಶ—:ಆತ್ಮನಲ್ಲಿ ಮನನ, ಆಕಾಶದಲ್ಲಿ ವಾಕ್ಕು, ವಾಯು ವಿನಲ್ಲಿ ಪಾಣಿ, ಅಗ್ನಿಯಲ್ಲಿ ಪಾದ, ಅಪ್ಪುವಿನಲ್ಲಿ ಗುಹ್ಯ, ಪೃಥ್ವಿಯಲ್ಲಿ ಪಾಯು, ಇಂತಿವು ಪೃಥ್ವ್ಯಂಶಗಳು.

ಇನ್ನು ಆತ್ಮನಲ್ಲಿ ಆಕಾಶ ಭಾವ, ಆತ್ಮನಲ್ಲಿ ವಾಯು ಚಿತ್ತ, ಆತ್ಮನಲ್ಲಿ ಅಗ್ನಿ ಹೃದಯ, ಆತ್ಮನಲ್ಲಿ ಅಪ್ಪು ತೃಪ್ತಿ, ಆತ್ಮನಲ್ಲಿ ಪೃಥ್ವಿ ಮನನ, ಇಂತಿವು ಆತ್ಮನ ಪಂಚೀಕೃತಿಗಳು. ಆಕಾಶದಲ್ಲಿ ಆಕಾಶ ಜ್ಞಾನ, ಆಕಾಶದಲ್ಲಿ ವಾಯು ಸಮಾನ, ಆಕಾಶದಲ್ಲಿ ಅಗ್ನಿ ಶ್ರೋತ್ರ, ಆಕಾಶದಲ್ಲಿ ಅಪ್ಪು ಶಬ್ದ, ಆಕಾಶದಲ್ಲಿ ಪೃಥ್ವಿ ವಾಕ್ಕು, ಇಂತಿವುಗಳು ಆಕಾಶದ ಪಂಚೀ ಕೃತಿಗಳು. ವಾಯುವಿನಲ್ಲಿ ಆಕಾಶ ಮನ, ವಾಯುವಿನಲ್ಲಿ ವಾಯು ವ್ಯಾನ, ವಾಯುವಿಲ್ಲಿ ಅಗ್ನಿ ತ್ವಕ್ಕು,ವಾಯುವಿನಲ್ಲಿ ಅಪ್ಪು ಸ್ಪರ್ಶನ, ವಾಯುವಿನಲ್ಲಿ ಪೃಥ್ವಿ ಪಾಣಿ; ಇಂತಿವು ವಾಯುವಿನ ಪಂಚೀಕೃತಿಗಳು. ಅಗ್ನಿಯಲ್ಲಿ ಆಕಾಶ ಬುದ್ಧಿ, ಅಗ್ನಿಯಲ್ಲಿ ವಾಯುವುದಾನ, ಅಗ್ನಿಯಲ್ಲಿ ಅಗ್ನಿ ನೇತ್ರ, ಅಗ್ನಿ ಯಲ್ಲಿ ಅಪ್ಪುರೂಪು, ಅಗ್ನಿಯಲ್ಲಿ ಪೃಥ್ವಿ ಪಾದ,ಇಂತಿವು ಅಗ್ನಿಯ ಪಂಚೀ ಕೃತಿಗಳು. ಅಪ್ಪುವಿನಲ್ಲಿ ಆಕಾಶ ಚಿತ್ತ, ಅಪ್ಪುವಿನಲ್ಲಿ ವಾಯು ಅಪಾನ, ಅಪ್ಪುವಿನಲ್ಲಿ ಅಗ್ನಿ ಜಿಹ್ವೆ, ಅಪ್ಪುವಿನಲ್ಲಿ ಪೃಥ್ವಿ ಗುಹ್ಯ, ಇಂತಿವು ಅಪ್ಪುವಿನ ಪಂಚೀಕೃತಿಗಳು. ಪೃಥ್ವಿಯಲ್ಲಿ ಆಕಾಶ ಅಹಂಕಾರ, ಪೃಥ್ವಿ ಯಲ್ಲಿ ವಾಯು ಪ್ರಾಣ, ಪೃಥ್ವಿಯಲ್ಲಿ ಅಗ್ನಿ ಘ್ರಾಣ, 'ಪೃಥ್ವಿಯಲ್ಲಿ ಅಪ್ಪು ಗಂಧ, ಪೃಥ್ವಿಯಲ್ಲಿ ಪೃಥ್ವಿ ವಾಯು, ಇಂತಿವು ಪೃಥ್ವಿಯ ಪಂಚೀ ಕೃತಿಗಳು. ಇಂತಿವು ಶರಣಂಗೆ ಜ್ಞಾನೋಪಕರಣ ಸ್ವರೂಪವಾಗಿಹವು- ತತ್ವಪಂಚೀಕರಣೋದ್ಧರಣೆಯ ಸಂಬಂಧ ಸಮಾಪ್ತ ಮಂಗಳಮಹಾ.

---

ಗುರುಭ್ಯೋನಮಃ

## ಮಂತ್ರಪಂಚೀಕರಣೋದ್ಧರಣೆ.

ಇಂತೀ ತತ್ವಪಂಚೀಕರಣಂಗಳು, ಪರಶಿವನ ಮುಖದಿಂ ಜನಿಸಿದ ಪ್ರಣವ ಪಂಚಾಕ್ಷರಿಯಿಂ ನಿವೃತ್ತಿಮುಖವನೆಯ್ದಿದ ಮಂತ್ರಪಂಚೀಕರ

ಣೋತ್ಪತ್ತಿ ನಿರ್ದೇಶವೆಂತೆಂದೊಡೆ:—ಯ ಓಂ ಭಾವ, ಯ ಯ ಜ್ಞಾನ, ಯ ವ ಮನ,ಯ ಶಿ ಬುದ್ಧಿ, ಯ ಮ, ಚಿತ್ತ, ಯ ನ ಅಹಂಕಾರ; ಇಂತಿವು ಯಕಾರದಂಶಗಳು. ವ ಓಂ ಚಿತ್ತ, ವ ಯ ಸಮಾನ, ವವ ವ್ಯಾನ, ವಶಿ ಉದಾನ, ವಮ ಅಪಾನ, ವನ ಪ್ರಾಣ, ಇಂತಿವು ವಕಾರದಂಶಗಳು. ಶಿ ಓಂ ಹೃದಯ, ಶಿಯ ಶ್ರೋತ್ರ, ಶಿವ ತ್ವಕ್ಕು, ಶಿಶಿ ಚಕ್ಷು, ಶಿಮ ಜಿಹ್ವೆ, ಶಿನ ಘ್ರಾಣ. ಇಂತಿವು ಶಿಕಾರದಂಶಗಳು. ಮ ಓಂ ತೃಪ್ತಿ, ಮಯ ಶಬ್ದ, ಮವ ಸ್ಪರ್ಶ, ಮಶಿ ರೂಪು, ಮಮ ರಸ, ಮನ ಗಂಥ. ಇಂತಿವು ಮಕಾರದಂಶಗಳು. ನಓಂ ಮನನ, ನಯ, ವಾಕ್ಕು ನವ,ಪಾಣಿ, ನಶಿ ಪಾದ, ನಮ ಗುಹ್ಯ, ನನ ಪಾಯು, ಇಂತಿವು ನಕಾರದಂಶಗಳು. ಮತ್ತಂ. ಓಂ ಯ,ಭಾವ, ಓಂವ ಚಿತ್ತ, ಓಂಶಿ ಹೃದಯ, ಓಂಮ, ತೃಪ್ತಿ, ಓಂನ ಮನ. ಇಂತಿವು ಓಂಕಾರದ ಪಂಚೀಕೃತಿಗಳು. ಯಯ, ಜ್ಞಾನ, ಯವ, ಸಮಾನ, ಯಶಿ, ಶ್ರೋತ್ರ ಯಮ, ಶಬ್ದ, ಯನ, ವಾಕ್ಕು ಇಂತಿವು ಯಕಾರದ ಪಂಚೀಕೃತಿಗಳು. ವಯ ಮನ, ವವ ವ್ಯಾನ, ವಶಿ ತ್ವಕ್ಕು, ವಮ ಸ್ಪರ್ಶ, ವನ ಪಾಣಿ, ಇಂತಿವು ವಕಾರದ ಪಂಚೀಕೃತಿಗಳು. ಶಿಯ ಬುದ್ಧಿ, ಶಿವ ಉದಾನ, ಶಿಶಿ ನೇತ್ರ ಶಿಮ ರೂಪು, ಶಿನ ಪಾದ, ಇಂತಿವು ಶಿಕಾರದ ಪಂಚೀಕೃತಿಗಳು. ಮಯ, ಚಿತ್ತ, ಮವ, ಅಪಾನ, ಮಶಿ, ಜಿಹ್ವೆ, ಮಮ, ರಸ, ಮನ, ಗುಹ್ಯ; ಇಂತಿವು ಮಕಾರದ ಪಂಚೀಕೃತಿಗಳು. ನಯ ಅಹಂಕಾರ, ನವ ಪ್ರಾಣ, ನಶಿ ಘ್ರಾಣ ನಮ ಗಂಥ, ನನ, ಪಾಯು, ಇಂತಿವು ನಕಾರದ ಪಂಚೀಕೃತಿಗಳು. ಇಂತಿವು ಶರಣಂಗೆ ಅರ್ಪಣಸಾಧನೋಪಕರಣಸಕೀಲಂಗಳಾಗಿಹವು. ಮಂತ್ರಪಂಚೀಕರಣೋದ್ಧರಣೆಯ ಸಂಬಂಧಸಮಾಪ್ತ ಮಂಗಳಮಹಾ.

---

ಗುರುಭ್ಯೋನಮಃ.

## ಲಿಂಗಪಂಚೀಕರಣೋದ್ಧರಣೆ.

ಇಂತು ಶರಣಂಗಂಗವಾದ ಮಂತ್ರತತ್ವಕರಣಂಗಳು ಮಹಾಲಿಂಗವಾದಿಯಾದ ಪಂಚಲಿಂಗ ಸಂಬಂಧದಿಂ ತೋರ್ಪ ಲಿಂಗಪಂಚೀಕರಣದ ನಿರ್ದೇಶವನಾದೊಡು ಪೂರ್ವೋಕ್ತಕ್ರಮದಂತೆ ನೋಡಿಕೊಂಬುದು. ಲಿಂಗಪಂಚೀಕರಣೋದ್ಧರಣೆಯ ಸಂಬಂಧ ಸಮಾಪ್ತಮಂಗಳಮಹಾ.

ಗುರುಭ್ಯೋ ನಮಃ.

## ಮ ಹಾ ಲಿ ಂ ಗೋ ದ್ಧ ರ ಣೆ.

ಇಂತೀ ಸರ್ವಮಂತ್ರದೇವತಾಮಯವಾದ ಶಿವಚಕ್ರವೆಂಬುದು, ಶಿವತತ್ವವಾದ ನಿಜನಿವಾಸವೆನಿಸಿ, ಶರಣರಲ್ಲಿ ಅಂತರ್ಗತವಾದ ಶಿವತತ್ವವೆ ನಾದ ಲಿಂಗ ಬಿಂದು ಪೀಠ ತೇಜೋಮೂರ್ತಿಯಾಗಿ ಅದ್ಯಂತರಹಿತವೆನಿಸಿ, ಸ್ಥೂಲಸೂಕ್ಷ್ಮಭರಿತನಾಗಿ, ಶಿವಶರಣರಲ್ಲಿ ಕರತಳಾಮಳಕವಾಗಿ ಪ್ರಕಾಶಿಸುತಿರ್ಪ ಮಹಾಲಿಂಗಾಕಾರವಾಗಿಹುದು. ಆ ಲಿಂಗಲಕ್ಷಣವನುದ್ಧರಿಸುವ ಭೇದವ ಶಿವಾಗಮಂಗಳಿಂ ವಿಸ್ತರಿಸಲಾಯ್ತು, ಅದೆಂತೆಂದೊಡೆ.

ಪೂರ್ವೋಕ್ತಬಿಂದು ವಿಧಾನದಂತೆ, ರಾಜಾನಂದದ ಹಿಟ್ಟಿನಲ್ಲಿ,ಅದ್ದಲ್ಪಟ್ಟ ಸೂತ್ರದಿಂ ಪೂರ್ವಾಪರಕ್ಕಾಗಿ ಹದಿನೆಂಟು ಸೂತ್ರಂಗಳಿಂ ಮಿಡಿಯಲು, ಪೂರ್ವಾಪರ ದಕ್ಷಿಣೋತ್ತರಮುಖವಾಗಿ ಹದಿನೇಳು ಪಜ್ತಿಗಳನುಳ್ಳ ಲಿಂಗದಾಕಾರವಾಗಿಹುದು, ಆ ಲಿಂಗಷಡಂಗಕ್ರಮ:—ಅಧಃಪಟ್ಟಿಕೆಯೆಂದು, ಅಧಃಕಂಜವೆಂದು,ಕಂಠವೆಂದು, (ಆ ಕಂಠವೆಂಬ ಶಬ್ದಕ್ಕೆ ಮತ್ತೊಂದು ವೃತ್ತವೆಂಬ ನಾಮ ಸಲ್ಲುವದು.) ಊರ್ಧ್ವಾಬ್ಜವೆಂದು, ಊರ್ಧ್ವಪಟ್ಟಿಕೆಯೆಂದು, ಆದ್ಯ ಪ್ರದಾರಿಕೆಯೆಂದು ಶಿವಲಿಂಗಪೀಠದ ಕೆಳಗಣ ನಾಲ್ಕುಕೊಟ್ಟಸ್ಥಾನ ಮೊದಲಾಗಿ, ಶಿವಲಿಂಗಾಕಾರದ ಮೊದಲು ಪಜ್ತಿಯ ನಾಲ್ಕು ಕೊಟ್ಟಸ್ಥಾನ ಕಡೆಯಾಗಿ, ಕ್ರಮದಿಂ ಕ್ರಮದಿಂ ಷಡಂಗಂಗಳು ಹೇಳಲ್ಪಟ್ಟುವು. ಇಂತಿವರಲ್ಲಿ ಷಡಕ್ಷರನ್ಯಾಸಕ್ರಮ:—ಅಧಃ ಕಂಜದ ಕೆಳಗಣ ಅಧಃಪಟ್ಟಿಕೆಯೆ,ಆಧಾರಸ್ಥಾನವಲ್ಲಿಯ ಚತುಃ ಕೋಟಂಗಳೆ ಚತುಃ ಪತ್ರ,ವವರಲ್ಲಿ,ವ ಶ ಷ ಸ ಎಂಬ ನಾಲ್ಕು ಅಕ್ಷರಂಗಳು,ಅದರಿಂದ ಮೇಲಣ ಅಧಃ ಕಂಜವೆ ದೇದೀಪ್ಯಮಾನ,ವಲ್ಲಿ ಷಟ್ಕೋಟಂಗಳೆ ಷಡ್ದಳ, ವವರಲ್ಲಿ, ಬ ಭ ಮ ಯ ರ ಲ ಎಂಬ ಷಡಕ್ಷರಂಗಳು. ಅದರಿಂದ ಮೇಲಣ ವೃತ್ತವೆ ಮಣಿಪೂರಕಸ್ಥಾನ, ವವರಲ್ಲಿಯ ದಶಕೋಟಂಗಳೆ ದಶದಳ, ವವರಲ್ಲಿ ಡ ಢ ಣ ತ ಥ ದ ಧ ನ ಪ ಫ ಎಂಬ ದಶಾಕ್ಷರಂಗಳು, ಅದರಿಂದ ಮೇಲಣ ಊರ್ಧ್ವಕಂಜವೆಂಬ ನಾಮವನುಳ್ಳ ಹೃದಯಸ್ಥಾನದಲ್ಲಿಯ ದ್ವಾದಶಕೋಟಂಗಳೆ ದ್ವಾದಶದಳ, ವವರಲ್ಲಿ, ಕ ಖ

ಗ ಘ ಙ ಚ ಛ ಜ ಝ ಞ ಟ ಠ ಎಂಬ ದ್ವಾದಶಾಕ್ಷರಂಗಳು, ಅದರಿಂದ ಮೇಲಣ ಊರ್ಧ್ವ ಪಟ್ಟಿಕೆಯೆ ಕಂಠಸ್ಥಾನ, ವವರಲ್ಲಿ: ಷೋಡಶಕೋಟಂಗಳೆ ಷೋಡಶದಳ, ವವರಲ್ಲಿ, ಅ ಆ ಇ ಈ ಉ ಊ ಋ ೠ ಌ ೡ ಏ ಐ ಓ ಔ ಅಂ ಅಃ ಎಂಬ ಷೋಡಶಾಕ್ಷರಂಗಳು, ಅದರಿಂದ ಮೇಲಣ ಆದ್ಯ ಪ್ರ ಚಾರಿಕೆಯೆಂಬ ಆಜ್ಞಾ ಚಕ್ರದಲ್ಲಿ ನಾಲ್ಕುಕೊಟ್ಟಂಗಳ ಮಧ್ಯದಲ್ಲಿ, ಎರ ಡು ದಳಂಗಳಲ್ಲಿ, ಹಂ ಸ ಎಂಬಕ್ಷರದ್ವಯಂಗಳು, ಅದಲ್ಲದೆ ಹಂ ಕ್ಷಂ ಎಂಬ ದ್ವಿವರ್ಣಂಗಳನಾದೊಡುನ್ಯಾಸವಮಾಡಿದ ತದನಂತರದಲ್ಲಿ:- ಕುಟಿಲೆ,ಕುಂ ಡಲಿ,ಪರನಾದ, ಪರಬಿಂದು, ಪರವಿದ್ಯೆ, ಶಬ್ದತತ್ವ, ಶಬ್ದಬ್ರಹ್ಮ,ಶಿವತತ್ವ,ಷ ಡಧ್ವಬೀಜ, ಶಿವಲಿಂಗಪೀಠ, ಯೋಗಪೀಠ, ಮಂತ್ರಪೀಠ, ವ್ಯೋಮಶಕ್ತಿ, ವಿ ದ್ಯಾಶಕ್ತಿ, ವಾಗೀಶ್ವರಿ, ಅನಾಹತೆ, ಅಘೆ, ಶವಾಕುಳೆಯೆಂಬಿವೆ ಬಿಂದುಸೂ ತ್ರಂಗಳು, ಆ ಬಿಂದುಸೂತ್ರಂಗಳೆ ಊರ್ಧ್ವಪ್ರವೇಶವಾದ ಹದಿನೆಂಟು ರೇ ಖೆಗಳು. ಬಳಿಕ ಕಾರಣಶರೀರಿ, ಸಮಷ್ಟ್ಯಭಿಮಾನಿ, ಅಗ್ನ್ಯುಪಹಿತ, ಚೈತನ್ಯ, ಕಾರಣೋಪಾಧಿಕ, ಮಾಯೋಪಾಧಿಕ, ಮಾಯಾಭಾಷೆ, ಮಾಯಾವಿಜ ಯ, ಜಗದ್ಯೋನಿ, ಆನಂದಮಯ, ಅವ್ಯಕ್ತ, ಅಧ್ಯಾಕೃತ, ಶಬಲಬ್ರಹ್ಮ, ಸಗುಣಬ್ರಹ್ಮ, ಪರಮ, ಪರದೇವತೆ, ತತ್ವದಮುಖ್ಯಾರ್ಥರೆಂಬವರು ಆ ರೇಖೆಗಳ ಮಧ್ಯದ ಭವನಸ್ವರೂಪರೆಂದರಿವುದು. ಬಳಿಕ ಆ ಭವನಂಗಳ ಮಧ್ಯ ದ ಏಕಪಂಚಾಶದ್ವರ್ಣಂಗಳೆ ರುದ್ರಮೂರ್ತಿ ಬೀಜಂಗಳೆಂಬ ಅಘೋರೋದ್ಧಾರ ಣವು. ಶ್ರೀಕಂಠ, ಅನಂತ, ಸೂಕ್ಷ್ಮ, ತ್ರಿಮೂರ್ತಿ, ಅಮರೇಶ್ವರ, ಅಘೋರೇ ಶ, ಭಾರಭೂತಿ, ವಿರೇಶ, ಸ್ಥಾಣುಕ, ಹರ, ಚಂಡೇಶ,ಜಾತಕ, ಸದ್ಯೋಜಾತ, ಅನುಗ್ರಹೇಶ್ವರ, ಅಕ್ರೂರ, ಮಹೇಶ್ವರನೆಂಬ ಹದಿನಾರು ನಾಮವನುಳ್ಳ, ರುದ್ರಮೂರ್ತಿಗಳು ಕಂಠಸ್ಥಾನದ ಹದಿನಾರು ಸ್ವರಾಕ್ಷರ ರುದ್ರಮೂರ್ತಿಗ ಳೆಂದರಿವುದು. ಮರಳಿ ವಿಕಲಕ್ಷರಾದಿ ದೇವತೆಗಳ ವಿವರ. ಕ್ರೋಧೀಶ, ಚಂ ಡೇಶ,ಪಂಚಾಂತಕ, ಶಿವೋತ್ತಮ, ಏಕರುದ್ರ, ಕೂರ್ಮ, ಏಕನೇತ್ರ, ಚತು ರಾನನ, ಅಜೇಶ, ಶರ್ವ, ಸೋಮೇಶ, ಲಾಂಗುಲಿಯೆಂಬ ದ್ವಾದಶ ರುದ್ರ ಮೂರ್ತಿಗಳು ಅನಾಹತಾಕ್ಷರ ಸ್ವರೂಪರೆಂದರಿವುದು. ದಾರುಕ, ಅರ್ಧ ನಾರೀಶ, ಉರುಕಾಂತ, ಆಷಾಢಿ, ದಂಡಿ, ಅತಿರುದ್ರ, ಮೀನರುದ್ರ, ಮೇಷ

ರುದ್ರ,ಲೋಹಿತ,ಶಿಖಿಯೆಂಬ ದಶರುದ್ರರು,ಮಣಿಪೂರಕಾಕ್ಷರಸ್ವರೂಪರೆಂದ ರಿವುದು. ಸಕಲಾಂಡ, ದ್ವಿಕಲಾಂಡ, ಮಹಾಕಾಲ, ಕಪಾಲಿ, ಭುಜಂಗೇಶ, ಪಿನಾಕಿಯೆಂಬ ಆರುರುದ್ರರು ಸ್ವಾಧಿಷ್ಠಾನಾಕ್ಷರಸ್ವರೂಪರೆಂದರಿವುದು. ಖಡ್ಗೀಶ, ಬಕ, ಶ್ವೇತ, ಭೃಂಗೀಶನೆಂಬ ನಾಲ್ವರುದ್ರರು ಆಧಾರಾಕ್ಷರಸ್ವ ರೂಪರೆಂದರಿವುದು. ಲಕುಲೀಶ, ಶಿವನೆಂಬೀರ್ವರುದ್ರರು, ಆಜ್ಞಾಚಕ್ರಸ್ವರೂ ಪವೆಂದರಿವುದು. ಸರ್ವಕರ್ತನೆಂಬ ರುದ್ರನೆ ಶಿವಾಕ್ಷರಸ್ವರೂಪನೆಂದರಿವುದು. ಸಕಲವಿಕಲಾಕ್ಷರಗಳೆಂಬ ಏಕಪಂಚಾಶದ್ವರ್ಣಗಳೆಂಬ ತ್ರಿಶೂಲ ಕಪಾಲಂಗ ಳೆಂದರಿದು,ರಕ್ತವರ್ಣಸ್ವರೂಪವುಳ್ಳ 'ಏಕಪಂಚಾದ್ರುದ್ರಬೀಜಂಗಳಾದಕಾರ ಣ ಈ ವರ್ಣಪೂರಕಮಾದ ಷಟ್ಚಕ್ರಂಗಳು ಶಿವಚಕ್ರಂಗಳೆಂದರಿವುದು. ಷಟ್ಚ ಕ್ರಾಂತಸ್ಥವಾದ ಏಕಪಂಚಾಶದ್ರುದ್ರಾಭಿಧಾನವನುಳ್ಳ ವರ್ಣಂಗಳು, ಶಿವಮಂತ್ರವನಾಚರಿಸುವಂತಲ್ಲಿ ಶಿವಬೀಜಂಗಳು, ಶಕ್ತಿಮಂತ್ರವನಾಚರಿ ಸುವಂತಲ್ಲಿ ಶಕ್ತಿಬೀಜಂಗಳಾಗಿಹಕಾರಣ ಪೂರ್ವೋಕ್ತವಿಧಾನದಂತೆ ಆಧಾ ರಾದಿಪಂಚಚಕ್ರಂಗಳಲ್ಲಿ ಬೇರೆನ್ಯಾಸಮಾಡಿ ಶೂನ್ಯಾಕಾರದೆಡಬಲದ ಮನೆ ಗಳಲ್ಲಿ ಕ್ಷಕಾರಳಕಾರಂಗಳಂ ಬರೆಯಲು ಏಕಪಂಚಾಶಚ್ಛಕ್ತಿಬೀಜಂಗಳು.

ಇವಕ್ಕರ್ಥೋದ್ಧರಣೆ. ಪೂರ್ಣೋದರಿ,ಪರಿಜೆ,ಶಾಲ್ಮಲಿ,ಲೋಲಾಕ್ಷಿ, ವ ರ್ತುಳಾಕ್ಷಿ, ದೀರ್ಘಘೋಣಿ, ದೀರ್ಘಮುಖಿ, ದೀರ್ಘಜಿಹ್ವೆ, ಕುಂಡೋ ದರಿ, ಊರ್ಧ್ವಕೇಶಿ, ವಿಕೃತಮುಖಿ, ಜ್ವಾಲಾಮುಖಿ, ಉಲ್ಕಾಮುಖಿ, ಶ್ರೀ ಮುಖಿ, ವಿದ್ಯಾಮುಖಿ, ವೈಖರಿಯೆಂಬ ಷೋಡಶ ರುದ್ರಶಕ್ತಿಯರು ಕಂಠ ಸ್ಥಾನದ ಸ್ವರಾಕ್ಷರ ರುದ್ರಶಕ್ತಿಯರೆಂದರಿವುದು. ಮರಳಿ ವಿಕಲಾಕ್ಷರಾದಿ ರುದ್ರಶಕ್ತಿಯರವಿವರ:—ಮಹಾಕಾಳಿ, ಸರಸ್ವತಿ, ಗೌರಿ, ಮಂತ್ರಶಕ್ತಿ, ಆತ್ಮಶಕ್ತಿ, ಭೂತಮಾತೆ, ಲಂಬೋದರಿ, ದ್ರಾಪದಿ, ನಗರಿ, ಖೇಚರಿ, ಮಂ ಜರಿ, ರೂಪಿಣಿ ಎಂಬ ದ್ವಾದಶರುದ್ರಶಕ್ತಿಯರು ಅನಾಹತಾಕ್ಷರಸ್ವರೂಪಿಣಿ ಯರೆಂದರಿವುದು. ಪರಿಜೆ, ಕಾಲೋದರಿ, ಪೂತನೆ, ಭದ್ರಕಾಳಿ, ಯೋಗಿನಿ, ಶಂಖಿನಿ, ಘರ್ಜಿನಿ, ಕಾಳಾವತಿ, ಕೂರ್ಧನಿ, ಕಪರ್ದಿಎಂಬ ದಶರುದ್ರಶಕ್ತಿಯ ರು ಮಣಿಪೂರಕಾಕ್ಷರ ಸ್ವರೂಪಿಣಿಯರೆಂದರಿವುದು. ವಾಗ್ಜೆ,ಜಯೆ,ಸುಮುಖಿ, ಈಶ್ವರಿ, ರೇವತಿ, ಮಾಧವಿಯೆಂಬ ಷಟ್‌ಶಕ್ತಿಯರು ಸ್ವಾಧಿಷ್ಠಾನದ ರುದ್ರ

ಶಕ್ತಿಯರೆಂದರಿವುದು. ವಾರುಣಿ, ವಾಯವಿ, ರಕ್ಷೋವಿದಾರಣಿ ಸಹಜೆಯೆಂಬ ನಾಲ್ವರು ಶಕ್ತಿಯರು ಆಧಾರಾಕ್ಷರಸ್ವರೂಪಿಣಿಯರೆಂದರಿವುದು. ಲಕ್ಷ್ಮಿ, ವ್ಯಾಪಿಸಿಯೆಂಬ ಉಭಯಶಕ್ತಿಯರು ಅಗ್ನಿಚಕ್ರಾಕ್ಷರಸ್ವರೂಪಿಣಿಯೆಂದರಿವುದು. ಮಾಯಾನ್ವಿತೆಯೆಂಬ ಶಕ್ತಿಯೇ ವಿದ್ಯಾಬೀಜಾಕ್ಷರ ಸ್ವರೂಪಿಣಿಯೆಂದರಿವುದು. ಸಿಂಡೂರದೋಪಾಡಿಯ ಕೆಂಪುವರ್ಣದ ಶರೀರವನುಳ್ಳ,ಕನ್ನೈದಿಲ ಕಪಾಲಗಳಂ ಧರಿಸಿದ ಹಸ್ತಂಗಳುಳ್ಳ ಐವತ್ತೊಂದು ಶಕ್ತಿದೇವತೆತೆಯರು, ಐವತ್ತೊಂದು ಬೀಜಂಗಳು ಪಿಂಡದಲ್ಲಿ ಇರುತ್ತಿಹವು. ಮತ್ತಂ.ಹಿಂದಣ ಚಕ್ರೋದ್ಧರಣೆಯ ಪಟಲದಲ್ಲಿ ಹೇಗೆ ಕಲ್ಪಿಸಿಹವೋ ಹಾಗೆ ರುದ್ರರೂ, ರುದ್ರಶಕ್ತಿಯರೂ ಕಲ್ಪಿಸಿಹವು. ಇನ್ನು ಮಂತ್ರನ್ಯಾಸ. ಓಂಕಾರದ ಮೇಲಣ ತ್ರಿಕೋಟದೊಳು,ಅ ಉ ಮ ಎಂಬ ಮಂತ್ರವನು, ಅದರ ಊರ್ಧ್ವತ್ರಿಕೊಟ್ಟದೊಳು,ಬಸವ ಎಂಬ ಮಂತ್ರವನ್ನೂ,ಅದರ ಮೇಲಣ ಕೊಟ್ಟದೊಳು,ಕ್ಷಕಾರಮಂತ್ರವನ್ನೂ, ಅದರ ಊರ್ಧ್ವ ಕೊಟ್ಟದೊಳು ಹಕಾರಮಂತ್ರಮನ್ನೂ ಹಂಸ ಎಂಬುದಂ ಬರೆದಿರ್ಪ ಸಾಲಿನ ಊರ್ಧ್ವ ತ್ರಿಕೋಟದೊಳು ಹ್ರಂ, ಹ್ರಿಂ, ಹ್ರುಂ, ಎಂಬ ತ್ರಿಮಂತ್ರಗಳನ್ನೂ ಮತ್ತೊಂದು ಕಡೆಯಲ್ಲಿ ಹ್ರೈಂ ಹ್ರೌಂ ಹ್ರಃ ಎಂಬ ತ್ರಿಮಂತ್ರಗಳನ್ನೂ ನ್ಯಾಸವಮಾಡಲಿವು ಶಿವಾಗಮ ಮಂತ್ರಂಗಳೆನಿಸಿಹವು, ಬಳಿಕ ಶೂನ್ಯತ್ರಯಂಗಳೆ ನೇತ್ರಜಿಹ್ವೆಗಳು, ದ್ವಿಶೂನ್ಯಂಗಳೆ ಕರ್ಣಂಗಳೆಂದರಿವುದು. ಇನ್ನು ಷಡಂಗಗಳಲ್ಲಿ ಷಡಂಗಮಂತ್ರನ್ಯಾಸ.

ಅಧಃ ಪಟ್ಟಿಕೆಯಲ್ಲಿ ಓಂ ಹ್ರಂ ಹೃದಯಾಯನಮಃ ಎಂಬ ಹೃದಯಮಂತ್ರವನ್ನು, ಅಧಃಕಂಜದಲ್ಲಿ ಓಂ ಹ್ರಿಂ ಶಿರಸೇ ಸ್ವಾಹಾ ಎಂಬಶಿರೋಮಂತ್ರವನ್ನು, ಕಂಠಸ್ಥಾನದಲ್ಲಿ, ಓಂ ಹ್ರುಂ ಶಿಖಾಯೈ ವಷಟ್ ಎಂಬ ಶಿಖಾಮಂತ್ರವನ್ನು,ಊರ್ಧ್ವಕಂಜದಲ್ಲಿ ಓಂ ಹ್ರೈಂ ಕವಚಾಯ ಹುಂ, ಎಂಬ ಕವಚಮಂತ್ರವನ್ನು ಊರ್ಧ್ವ ಪಟ್ಟಿಕೆಯಲ್ಲಿ ಓಂ ಹ್ರೌಂ ನೇತ್ರತ್ರಯಾಯ ವೌಷಟು, ಎಂಬ ನೇತ್ರಮಂತ್ರವನ್ನೂ, ಆದ್ಯಪ್ರದಾರಿಕೆಯಲ್ಲಿ ಓಂ ಹ್ರಃ ಅಸ್ತ್ರಾಯ ಫಟ್ ಎಂಬ ಅಸ್ತ್ರಮಂತ್ರವನ್ನೂ ನ್ಯಾಸಮಾಡುವುದು. ಇನ್ನು ಹಕಾರಮಂತ್ರವನ್ನು,ಆದ್ಯಪ್ರದಾರಿಕೆಯ ಮೇಲಣ ಲಿಂಗದಲ್ಲಿ,ಓಂಕಾರವನು

ಅಥಃಪ್ರದಾರಿಕೆಯಲ್ಲಿ,ಊರ್ಧ್ವ ಪಟ್ಟಿಕೆಯಿಂದ ಊರ್ಧ್ವಕಂಜಮುಟ್ಟಲು ಕ್ರಮದಿಂ ಮಕಾರವನ್ನು, ವೃತ್ತದಲ್ಲಿ ಉಕಾರವನ್ನು ಅಥಃಕಂಜದಲ್ಲಿ ಅಥಃಪಟ್ಟಿಕೆಯಲ್ಲಿ ಅಕಾರವನ್ನು ತಿಳಿವುದು. ಇನ್ನು ಷಡಕ್ಷರ ಮಂತ್ರನ್ಯಾಸ, ಶಿವಲಿಂಗದಲ್ಲಿ ಓಂಕಾರವನ್ನು ಶಕ್ತಿಪೀಠದ ಊರ್ಧ್ವಪಟ್ಟಿಕೆಯಲ್ಲಿ ಯಕಾರವನ್ನೂ, ಊರ್ಧ್ವಕಂಜದಲ್ಲಿ ವಕಾರವನ್ನೂ, ವೃತ್ತದ ಮಧ್ಯದಲ್ಲಿ ಶಿಕಾರವನ್ನೂ, ಅಥಃಕಂಜದಲ್ಲಿ ಮಕಾರವನ್ನೂ, ಅಥಃ ಪಟ್ಟಿಕೆಯಲ್ಲಿ ನಕಾರವನ್ನೂ ನ್ಯಾಸ ಮಾಡುವುದು, ಇನ್ನು ನಮಃಶಿವಾಯಎಂಬ ಸ್ಥೂಲಪಂಚಾಕ್ಷರಿಯ ಮಂತ್ರವನ್ನು ಕ್ರಮದಿಂ ಆಧಾರಾದಿಪಂಚಚಕ್ರಂಗಳಲ್ಲಿ ನ್ಯಾಸಮಾಡುವುದು.

ಇನ್ನು ಮಂತ್ರಮೂರ್ತಿ ಬೀಜಾಕ್ಷರಂಗಳಿಗೆ ಅರ್ಥೋದ್ಧಾರಣೆ.ಸರ್ವಜ್ಞತ್ವಾದಿ ಷಡಂಗಶಕ್ತಿಗಳೆ ಅ ಉ ಮ ಬ ಸ ವ ಎಂಬ ಮಂತ್ರಾಕ್ಷರ ಸ್ವರೂಪವೆಂದರಿವುದು. ಶಿವಾದಿಷಟ್ತತ್ವಂಗಳೇ ಹ್ರಂಕಾರಾದಿ ಮಂತ್ರಾಕ್ಷರ ಸ್ವರೂಪವೆಂದರಿವುದು, ಪರಶಿವಶಕ್ತಿಗಳೆ ಕ್ಷಕಾರ ಹಕಾರ ಮಂತ್ರಾಕ್ಷರಸ್ವರೂಪವೆಂದರಿವುದು. ಷಡ್ಬ್ರಹ್ಮವೆ ಷಡಂಗಮಂತ್ರ ಸ್ವರೂಪವೆಂದರಿವುದು. ಸರ್ವಜ್ಞತ್ವ ಸರ್ವೇಶ್ವರತ್ವ ಸರ್ವನಿಯಂತೃತ್ವ ಸರ್ವಾಂತರ್ಯಾಮಿತ್ವ, ಸರ್ವಾತ್ಮಕತ್ವ ಸರ್ವಶಕ್ತತ್ವವೆಂಬಿವು ಷಡಕ್ಷರಮಂತ್ರಾಕ್ಷರಸ್ವರೂಪವೆಂದರಿವುದು. ಉಪಾದಾನತ್ವ ಅನುಪ್ರವೇಶತ್ವ ನೇಮಕತ್ವ ರುದ್ರತ್ವ ಶ್ರುತ್ಯಾಚಾರತ್ವವೆಂಬ ಪಂಚಕವು ಸ್ಥೂಲಪಂಚಾಕ್ಷರೀ ಸ್ವರೂಪವೆಂದರಿವುದು. ಚಿತ್ಪ್ರಕಾಶವೆ ಕ್ಷಳಾಕ್ಷರ ಸ್ವರೂಪವೆಂದರಿವುದು. ಇನ್ನು ಷಡಧ್ವನ್ಯಾಸ:— ಚತುರ್ವರ್ಣವನುಳ್ಳ ಅಥಃಪಟ್ಟಿಕೆಯಲ್ಲಿ ಕಾಲಾಗ್ನಿ ರುದ್ರನ ಭುವನ ಮೊದಲಾಗಿ, ಅನಾಶ್ರಿತಭುವನ ಕಡೆಯಾಗಿ ಇನ್ನೂರ ಇಪ್ಪತ್ತುನಾಲ್ಕುಭುವನಾಧ್ವವನು, ಷಡುವರ್ಣವನುಳ್ಳ ಅಥಃಕಂಜದಲ್ಲಿ ವ್ಯೋಮವ್ಯಾಪಿಯೆಂಬ ಪದದಿ ಎಂಭತ್ತೆಂಟುಪದಾಧ್ವವನು, ದಶವರ್ಣವನುಳ್ಳ ವೃತ್ತದಲ್ಲಿ ಅಕಾರಾದಿ ಕ್ಷಕಾರಾಂತಮಾದ ಐವತ್ತೊಂದು ವರ್ಣವನುಳ್ಳ ಊರ್ಧ್ವಕಂಜದಲ್ಲಿ ಈಶಾನ್ಯಾದಿ ಸದ್ಯೋಜಾತಕಡೆಯಾದ ಮೂವತ್ತೆಂಟು ಕಲಾಧ್ವವನು, ಷೋಡಶವರ್ಣವನುಳ್ಳ ಊರ್ಧ್ವಪಟ್ಟಿಕೆಯಲ್ಲಿ ಶಿವಾದಿ ಪೃಥಿವ್ಯಂತಮಾದ ಮೂವತ್ತಾರು ತತ್ವವನು, ವರ್ಣದ್ವಯವನುಳ್ಳ ಅಥಃಪ್ರದಾರಿಕೆಯಲ್ಲಿ, ಸ

ದ್ಯೋಜಾತಾದಿ ಪಂಚಬ್ರಹ್ಮ ಮಂತ್ರವೈದು, ಹೃದಯಾದಿ ಷಡಂಗಮಂತ್ರ ವಾರು,ಇಂತೀಏಕಾದಶಮಂತ್ರವಾದಿಯಾಪಥ್ಯವನು ನ್ಯಾಸವಮಾಡುವುದು.

ಇನ್ನು ಏಳುಕೋಟಿಮಹಾಮಂತ್ರಂಗಳಿಂ ಮಂತ್ರಿಸಲ್ಪಟ್ಟ ಶಿವಲಿಂಗಮುಖಕಲಾವಿಶೇಷಕ್ರಮ. ಶಶಿನಿ,ಅಜಗವ, ಜ್ಯೇಷ್ಠೆ,ಮರೀಚಿ, ಜ್ವಾಲಿನಿ ಇದು ಈಶಾನ್ಯಮುಖದಕಲೆಗಳು. ಶಾಂತಿ, ವಿದ್ಯೆ, ಪ್ರತಿಷ್ಠೆ ನಿವೃತ್ತಿ ಈ ನಾಲ್ಕು ತತ್ಪುರುಷಮುಖದ ಕಲೆಗಳು. ತಮ, ಮೋಹ, ಜಯ, ನಿದ್ರೆ, ಮೃತ್ಯು, ಮಾಯೆ, ಭಯ, ಜರೆ, ಇವೆಂಟೂ ಅಘೋರಮುಖದಕಲೆಗಳು. ರಜ, ರಕ್ಷ, ರತಿ, ಪಾಲ್ಯ, ಕಾಮಿನಿ, ಸಂಜೀವಿನಿ, ಕ್ರಿಯೆ, ಪ್ರಿಯೆ, ವೃದ್ಧಿ,ಛಾಯೆ, ಧಾತ್ರಿ, ಬ್ರಹ್ಮಿಣಿ, ಮೋಹಿನಿ, ಅಭಯೆ, ಈ ಹದಿಮೂರು ವಾಮದೇವ ಮುಖದ ಕಲೆಗಳು. ಸಿದ್ಧಿ ವೃದ್ಧಿ ಧೃತಿ, ಲಕ್ಷ್ಮಿ, ಮದ, ಕಾಂತಿ, ಸ್ವಾಧು, ಮತಿ, ಈ ಎಂಟುವ ಸದ್ಯೋಜಾತ ಮುಖದ ಕಲೆಗಳೆಂದರಿವುದು. ಇನ್ನೊಂದುಪ್ರಕಾರ ಶ್ರೀಪರಮೇಶ್ವರಂಗೆ, ಓಂಕಾರವೇ ಚರ್ಮ, ಉಕಾರವೇ ರಕ್ತ, ಇಕಾರವೇ ಮಾಂಸ, ಋಕಾರವೇ ಮೇದಸ್ಸು, ಮಕಾರವೇ ಮಜ್ಜೆ ಯಕಾರವೆ ಅಸ್ಥಿ ಅಕಾರವೇ ಶುಕ್ಲ, ವಾಯುರಂಧ್ರವೇ ಅಕಾರ. ಗುಹ್ಯರಂಧ್ರವೆ ಅಹಂಕಾರ, ರಸರಂಧ್ರವೆ ಆಕಾರ ಪಿಂಗಳ ನಾಳವೇ ವಕಾರ; ಇಕಾರವೇ ಜ್ಞಾನಾಕಾರ, ದಕ್ಷಿಣನೇತ್ರದ್ವಾರವೇ ಋಕಾರ, ವಾಮನೇತ್ರದ್ವಾರವೇ ಉಕಾರ, ದಕ್ಷಿಣ ಶ್ರೋತ್ರದ್ವಾರವೇ ಇಕಾರ, ವಾಮಶ್ರೋತ್ರದ್ವಾರವೇ ಅಕಾರ ಘ್ರಾಳನೇತ್ರದ್ವಾರವೇ ಹ್ರಂಕಾರ, ಸುಷುಮ್ನಾನಾಳವೆ ಹಕಾರ: ಪರಾರ್ಥ ಮೂರೂವರೆಕೋಟಿ ಮಂತ್ರಂಗಳೆ ಸರ್ವಾಂಗದ ರೋಮಾವಳಿ, ಪೂರ್ವದ ಮೂರುವರೆ ಕೋಟಿಮಂತ್ರಂಗಳೆ ಸ್ಥೂಲದೇಹ, ಏಕಾದಶ ಮಂತ್ರಂಗಳೆ ಸೂಕ್ಷ್ಮದೇಹ ಪಂಚಪ್ರಸಾದ ಮಂತ್ರಂಗಳೆ ಕಾರಣದೇಹ. ಬಳಿಕಿನ್ನೊಂದು ಪ್ರಕಾರ. ಅಕಾರ ಆಕಾರಂಗಳೆ ಮೂರ್ಧ ಲಲಾಟಂಗಳು, ಇಕಾರ ಈಕಾರಂಗಳೆ ದಕ್ಷಿಣವಾಮನೇತ್ರಂಗಳು, ಉಕಾರ ಊಕಾರಂಗಳೆ ದಕ್ಷಿಣವಾಮಶ್ರೋತ್ರಂಗಳು, ಋ ಋೂ ಕಾರಂಗಳೆ ದಕ್ಷಿಣ ವಾಮನಾಸಾಪುಟಂಗಳು ೠ ೡ ಕಾರಂಗಳೆ ದಕ್ಷಿಣವಾಮಕಪೋಲಂಗಳು ಏಕಾರ ಐಕಾರಂಗಳೆ ಮೇಲುಕೆಳಗಣ ದಂತಪಂಕ್ತಿಗಳು ಓಕಾರ ಔಕಾರಂ

ಗಳೆ ಮೇಲುಕೆಳಗಣ ಓಷ್ಠಂಗಳು, ಅಂಕಾರ ಅಃಕಾರಂಗಳೆ ಮೇಲು ಕೆಳಗಣ ವಸಡಿಗಳು. ಇನ್ನೊಂದುಪ್ರಕಾರ. ಕಾದಿ ಪಂಚಾಕ್ಷರಂಗಳೆ ದಕ್ಷಿಣಪಂಚಹಸ್ತಂಗಳು, ಚಾದಿ ಪಂಚಾಕ್ಷರಂಗಳೆ ವಾಮ ಪಂಚಹಸ್ತಂಗಳು, ಪಾದಿ ಪಂಚಾಕ್ಷರಂಗಳೆ ದಕ್ಷಿಣಪಾದಂಗಳು, ತಾದಿ ಪಂಚಾಕ್ಷರಂಗಳೆ ವಾಮಪಾದಂಗಳು. ಪಕಾರವೆ ಉದರ, ಫಕಾರವೆ ಬಲದ ಪಾರ್ಶ್ವ, ಬಕಾರವೆ ಎಡದ ಪಾರ್ಶ್ವ, ಭಕಾರವೆ ಸ್ಕಂದ, ಮಕಾರವೆ ಹೃದಯ, ಯಕಾರಾದಿ ಸಕಾರದಿಂದ ಕೂಡಿದಕ್ಷರಂಗಳೆ ತ್ವಗಾದಿಸಪ್ತಧಾತುಗಳು. ಷಕಾರವೆ ಆತ್ಮ, ಳಕಾರವೆ ಶಕ್ತಿ, ಕ್ಷಕಾರವೆ ಪೂಜಕರ ಜನ್ಮಾದಿರಿಪು ವಿಷಯಮಾದ ಕ್ರೂರರೂಪ, ಮತ್ತಂ. ಇನ್ನು ಅಷ್ಟವರ್ಗಾಕ್ಷರಂಗಳ ಲಿಂಗತ್ರಯಸಂಬಂಧ:—ಅ ಇ ಉ ಋ ಓ ಐ ಈ ಆರೂ ಪುಲ್ಲಿಂಗಸಂಬಂಧ, ಋ ೠ ಌ ೡ ಈ ನಾಲ್ಕು ನಪುಂಸಕಲಿಂಗಸಂಬಂಧ. ಕ ಗ ಙ ಜ ಟ ಡ ತ ದ ಪ ಬ ಶ ಸ ಈ ಹನ್ನೆರಡು ಸ್ತ್ರೀಲಿಂಗಸಂಬಂಧ, ಉಳಿದುವೆಲ್ಲವು ನಪುಂಸಕಲಿಂಗ ಸಂಬಂಧವು,ಇಂತೀ ಸ್ವರ ವಿಕಲ ವ್ಯಾಪಕನೆಂಬ ತ್ರಿವಿಧ ರೂಪಪದಾರ್ಥಂಗಳು ನಾದಬಿಂದುಕಲಾತ್ರಯ ಪಾದತ್ರಯ ತತ್ತ್ವತ್ರಯ ಸಂಬಂಧವಾಗಿರ್ಪವೆಂದರಿವುದು. ಇನ್ನು ಅ ಆ ಇ ಮೂರೂ ಪೃಥ್ವೀಸಂಬಂಧ, ಈ ಉ ಊ ಮೂರೂ ಅಪ್ಪುಸಂಬಂಧ; ಋ ೠ ಌ ಈ ಮೂರೂ ಅಗ್ನಿಸಂಬಂಧ, ೡ ಏ ಐ ಈ ಮೂರು ವಾಯುಸಂಬಂಧ, ಓ ಔ ಅಂ ಈ ಮೂರು ಆಕಾಶ ಸಂಬಂಧ, ಅಃ ಎಂಬುದೊಂದೆ ಆತ್ಮಸಂಬಂಧ, ಇನ್ನು ಅವರ್ಗ ಆಕಾಶಸಂಬಂಧ, ಕವರ್ಗ ವಾಯುಸಂಬಂಧ, ಚವರ್ಗ ಅಗ್ನಿಸಂಬಂಧ, ಟವರ್ಗ ಅಪ್ಪುಸಂಬಂಧ, ಯವರ್ಗ ಶವರ್ಗಂಗಳೆರಡು ಪೃಥ್ವೀಸಂಬಂಧವೆಂದರಿವುದು. ಇನ್ನೊಂದುಪ್ರಕಾರ. ಊರ್ಧ್ವಪಟ್ಟಿಕೆಯಲ್ಲಿ ನಾಲ್ವತ್ತೆಂಟು, ಹಂಸ ಎಂಬ ಎರಡು, ಮ ಳ ಕ್ಷ ಎಂಬಿವು ಮೂರು, ಓಂಕಾರದ ಷಟ್ಕೃತಿಯಲ್ಲಿ ಐವತ್ತೈಯ್ದು, ಪಂಚಾಕ್ಷರಿ, ಅಂತು ಕೂಡಿ ನೂರೆಂಟುಪ್ರಣವವು; ಊರ್ಧ್ವ ಪಟ್ಟಿಕೆಯಲ್ಲಿ ಐವತ್ತೆರಡು, ಜಡಾಧಾರವಾರು, ಅಧಃಪಟ್ಟಿಕೆಯಲ್ಲಿ ಐವತ್ತು, ಅಂತು ಕೂಡಿ ನೂರೆಂಟುಪ್ರಣವ, ಷಡಕ್ಷರಿಯಲ್ಲಿ ಐವತ್ತು, ಪಂಚಾಕ್ಷರಿಯಲ್ಲಿ ನಾಲ್ವತ್ತೆಂಟು,ಷಡಕ್ಷರಿ ಪಂಚಾಕ್ಷರಿ ಅಂ

ತುಕೂಡಿ ಪ್ರಣವ, ಇನ್ನು ಬ ಸ ವ ಅ ಉ ಮ ಹಂ ಕ್ಷಂ ಎಂಬಿವು ಅಷ್ಟಾವರಣ ಪ್ರಣವ. ಈ ಮಂತ್ರಸಂಮಂಥವನರಿವುದು. ಇಂತೀ ಸರ್ವಕಾರಣವಪ್ಪ! ಮಹಾಲಿಂಗವೆ ವಕ್ಷಸ್ಥಲದ ಇಷ್ಟಲಿಂಗವೆಂದರಿವುದು, ಈ ಶಿವಲಿಂಗದ ಪಟ್ಟಣದಲ್ಲಿ ಸರ್ವಾಚಾರಸಂಪತ್ತಿನ ಸ್ಥಳ ಕುಳಸಂಬಂಥವನರಿವಡೆ, ಶೂನ್ಯಲಿಂಗೋದ್ಧರಣೆಯಲ್ಲಿ ನೋಡಿಕೊಂಬುದು. ಪೀಠ, ವೃತ್ತ, ಗೋಮುಖ ಮಂತ್ರಂಗಳನ್ನು ಅಖಿಳ ಬ್ರಂಹ್ಮಾಂಡ ಭುವನಭವನ ಸ್ಥಿತ ಚರಾಚರಾದಿ ಸಮಸ್ತ ಪ್ರಪಂಚಮಂ ಸೃಜಿಸಿ, ಗರ್ಭೀಕರಿಸಿಕೊಂಡು, ಅವರಾಗಮನ ಸ್ಥಿತಿ ಕಾರಣವೆನಿಸಿ, ಅಖಂಡಪರಿಪೂರ್ಣ ಗೋಳಕಾಕಾರ ತೇಜೋಮೂರ್ತಿಯಾಗಿ, 'ಭಕ್ತಲೀಲಾವಿನೋದ ಕಾರಣ ಸಗುಣ ನಿರ್ಗುಣ ಆನಂದಲೀಲೆಯ ನಟಿಸುತಿರ್ಪ ಮಹಾಲಿಂಗೋದ್ಧರಣೆಯ ಸಂಬಂಥ ಸಮಾಪ್ತ ಮಂಗಳ ಮಹಾ.

---

ಗುರುಭ್ಯೋನಮಃ.

## ಷ ಡ ಕ್ಷ ರೋ ದ್ಧ ರ ಣೆ.

ಇಂತಪ್ಪ ಶಿವಯೋಗಿಯ ಮನನತ್ರಾಣರೂಪವಾದ ಮಂತ್ರ ಚೈತನ್ಯ ಜ್ಞಾನಾರೂಢವಪ್ಪ, ಷಡಕ್ಷರೋದ್ಧರಣೆಯ ಸಂಬಂಥವೆಂತೆಂಡೊಡೆ:— ಪೂರ್ವಾಪರದಕ್ಷಿಣೋತ್ತರಕ್ಕಾಗಿ ಹದಿನಾಲ್ಕು ರೇಖೆಗಳಿಂ ಬರೆದ ಎಂಭತ್ತೈಯ್ದು ಭವನವನುಳ್ಳ ಯಂತ್ರವೆ ಚಿದಂಗ, ಮಧ್ಯಭವನ ಸ್ಥಾನದ ಅವಾಗ್ಜಪ್ರಣವವೆ ಚಿತ್ಪ್ರಾಣಲಿಂಗ, ಆ ಲಿಂಗವ ಸ್ಮರಿಸುವ ಎಂಭತ್ತುನಾಲ್ಕು ಭವನಸ್ಥವಾದ ಮಂತ್ರಾಕ್ಷರಂಗಳೆ ಲಿಂಗ ಜಂಗಮಭಾವನೆಯಿಂ ಭಜಿಸುವಲ್ಲಿ ಉಪಕರಣಸ್ವರೂಪವಾದ ವಿವರವೆಂತೆಂಡೊಡೆ:— ಶಿವಭಕ್ತರಲ್ಲಿ ಪ್ರೀತಿಯಾಗಿಹುದು. ಅವರನಾರಾಧಿಸಿ ಸಂತೋಷಪಡಿಸುವುದು. ಲಿಂಗವನರ್ಚಿಸುವುದು. ಪುಳಕ, ನಡುಕ, ನುಡಿಪಲ್ಲಟ, ಬೆಮರು, ಉಬ್ಬುವುದು ಮೊದಲಾಗಿ ಶಿವಲಿಂಗನಿಮಿತ್ತ ಅಂಗಚೇಷ್ಟೆ ಹುಟ್ಟುವದು. ಶಿವಕಥೆಯ ವಿನಯದಿಂ ಕೇಳುವುದು. ಸ್ವರ ನೋಟ ಕೈಯೆಡೆಯಾಟದಲ್ಲಿ ಮಾಡುವದು. ಆ

ಸ್ಯೂತ ಲಿಂಗವ ನೆನೆವುದು. ಲಿಂಗೋಪಜೀವಕನಾಗಿಹುದು ಇಂತಿವು ಅಷ್ಟ ವಿಧಭಕ್ತಿ. ಜಲ, ಗಂಧ, ಅಕ್ಷತೆ, ಪುಷ್ಪ, ಧೂಪ, ದೀಪ, ನೈವೇದ್ಯ. ತಾಂಬೂಲ ಇಂತಿವು ಅಷ್ಟವಿಧಾರ್ಚನೆ. ಲಿಂಗದಲ್ಲಿ ವಿಭೂತಿಯ ತಳಿವುದು,ಕರಣಮಂ ಮಾಡುವುದು,ಸ್ನಾನಮಂಮಾಡುವುದು,ಧೂಪವನೆತ್ತುವುದು, ಧೂಪದ ಹೊಗೆಯಲ್ಲಿ ಮುಳುಗಿಸುವುದು, ಗಂಧವ ಧರಿಸುವುದು,ಅಕ್ಷತೆಯನಿಡುವುದು, ಪುಷ್ಪವ ಅಲಂಕರಿಸುವದು. ದೀಪವ ಬೆಳಗುವುದು,ನೈವೇದ್ಯವಸಮರ್ಪಿಸುವದು, ತಾಂಬೂಲವ ಕೊಡುವುದು, ವಸ್ತ್ರವಹೊದ್ದಿಸುವದು,ಇಂತಿವು ದ್ವಾದಶ ವಿಧಾರ್ಚನೆ. ಅರ್ಘ್ಯ ಪಾದ್ಯ, ಆಚಮನ ಸ್ನಾನ, ಪಂಚಾಮೃತಾಭಿಷೇಕ, ದರ್ಪಣ, ಧೂಪ, ದೀಪ, ಚಾಮರ, ಆತಪತ್ರ, ಗೀತ, ವಾದ್ಯ, ನೃತ್ಯ,ನಮಸ್ಕಾರ, ಜಪ, ಪ್ರದಕ್ಷಿಣ ಇಂತಿವು ಷೋಡಶೋಪಚಾರವು. ಆಸನ, ಅಹಂನ್ನಾ, ಅರ್ಘ್ಯ, ಪಾದ್ಯ, ಆಚಮನ, ಯಜ್ಞೋಪವೀತ, ಪುಷ್ಪಮಾಲ್ಯ, ಅನುಲೇಪನ, ಆಭರಣ, ಬೀಸಣಿಗೆ, ಚಾಮರ, ಆತಪತ್ರ, ದರ್ಪಣ,ಘಂಟೆ, ಶಂಖ, ಗೀತ, ವಾದ್ಯ, ನೃತ್ಯ, ಪ್ರದಕ್ಷಿಣ, ನಮಸ್ಕಾರ, ಸ್ತುತಿ, ಯೋಚಿಸುವದು, ವಿಜ್ಞಾಪನ, ಸಜ್ಜೆಗೆಬಿಜಯಂಗೈಸುವದು, ಇಂತಿವು ಚತುರ್ವಿಂಶತಿ ಉಪಚಾರವು. ಇವು ಲಿಂಗಸಂಬಂಧವಾದ ಭಕ್ತಿಗಳು. ಮಜ್ಜನ, ಭಸ್ಮ, ಗಂಧ, ಅಕ್ಷತೆ,ಪುಷ್ಪಮಾಲ್ಯ, ಧೂಪ,ದೀಪ, ನೈವೇದ್ಯ, ಹಸ್ತಾಚಮನ, ತಾಂಬೂಲ, ಪೀತಾಂಬರ,ತೂರ್ಯತ್ರಯ, ಮಾನುನಿ, ಭೂಷಣ, ವಾಹನ, ಗೃಹವು ಇಂತಿ ಷೋಡಶ ವಿಧವೂ ಜಂಗಮಸಂಬಂಧವಾದ ಭಕ್ತಿಗಳೆಂದರಿದು ಸಂಬಂಧಿಸುವದು. ಇನ್ನಾ ಮಧ್ಯ ಹಕಾರಕ್ಕೆ ಸಂಮುಖವಾದ ಓಂಕಾರ ಸಹ ಓಂ ನಮಶ್ಶಿವಾಯ ಎಂದು ಬಿಡದೆ ಉಚ್ಚರಿಸಲು ಪೂರ್ವದಿಂ ದಕ್ಷಿಣಾಂತವಾಗಿ,ಇಪ್ಪತ್ತೊಂದಕ್ಕೆ ೩೬ ಪ್ರಣವಂಗಳಹವು, ಅವು ಮೂವತ್ತಾರೂ ಅಂಗಸ್ವರೂಪವೆಂದರಿವುದು, ದಕ್ಷಿಣದಿಂ ಪಶ್ಚಿಮಾಂತಮಾಗಿ ೨೧ಕ್ಕೆ ೩೬ ಪ್ರಣವಂಗಳಹವು, ಅವು ೩೬ ಲಿಂಗಸ್ವರೂಪವೆಂದರಿವುದು. ಪಶ್ಚಿಮದಿಂದುತ್ತರಾಂತವಾಗಿ, ೨೧ಕ್ಕೆ ೩೬ ಪ್ರಣವಂಗಳಹವು, ಅವು ೩೬ ಭಕ್ತಿಸ್ವರೂಪವೆಂದು ಅರಿವುದು, ಉತ್ತರದಿಂಪೂರ್ವಾಂತಮಾಗಿ ೨೧ಕ್ಕೆ ೩೬ ಪ್ರಣವಂಗಳಹವು, ಅವು ೩೬ ಪ್ರಸಾದಸ್ವರೂಪವೆಂದರಿವುದು. ಬಳಿಕಿವರಲ್ಲಿ ಉಳಿದ ಸಕೀಲಂಗ

ಳಡಗಿಪ್ಪರ್ಪವು, ಮತ್ತಮಿವರಲ್ಲಿ ಮೂರ್ತಿಸಂಬಂಧವನಾಡೊಡುತಿಳಿವುದು.
ಷಡಕ್ಷರೋದ್ಧರಣೆಯ ಸಂಬಂಧ ಸಮಾಪ್ತ ಮಂಗಳಮಹಾ.

---

ಗುರುಭ್ಯೋ ನಮಃ.

## ಬ ಸ ವಾ ಕ್ಷ ರೋ ದ್ಧ ರ ಣೆ.

ಇಂತೀ ಷಡಕ್ಷರಸಂಬಂಧವರಿದ ಶಿವಯೋಗಿಯ ಪರತತ್ವದ ಜ್ಞಾನ.
ಸಾಧನ ಪರಮ ಮುಕ್ತಿಸಾಧನವಪ್ಪ, ಬವವಾಕ್ಷರೊದ್ಧರಣೆಯ ಸಂಬಂಥ
ವೆಂತೆಂದೊಡೆ:— ಪರತತ್ವದ, ಪರಮಜ್ಞಾನದ, ಜ್ಯೆತನ್ಯವೆ ಪರಶಕ್ತಿ, ಆ
ಪರಶಕ್ತಿಯ ಸುನಾದ ಜ್ಯೆತನ್ಯವೆ ಬಕಾರ, ಚಿತ್ಪ್ರಭಾವರಣವೆ ಸಕಾ ರ,
ಚಿತ್ಕಲಾ ತೇಜಃ ಪುಂಜವೆ ವಕಾರ,ಇಂತೀ ಬಸವಾಕ್ಷರತ್ರಯಕ್ಕೆ ವಿವರ. ಶೂ
ನ್ಯ, ನಿಷ್ಕಲ, ಶಿವ ಎಂಬ ತತ್ವತ್ರಯ, ಸತ್ತು ಚಿತ್ತು ಆನಂದವೆಂಬ ಲಕ್ಷಣ
ತ್ರಯ, ಸದಾಶಿವ, ಈಶ್ವರ, ರುದ್ರರೆಂಬ ಮೂರ್ತಿತ್ರಯ, ಇಚ್ಛಾ, ಜ್ಞಾ
ನ, ಕ್ರಿಯೆಯೆಂಬ ಶಕ್ತಿತ್ರಯ, ಭವ ಮೃಡ ಹರರೆಂಬ ತ್ರಯಾವಯವಸ್ವ
ರೂಪಿನಿಂ, ತನುತ್ರಯ, ಜೀವತ್ರಯ, ಆವಸ್ಥಾತ್ರಯ. ಮನತ್ರಯ ಭಾವ
ತ್ರಯೋತ್ಪತ್ತಿ ಹೇತುವಿನಿಂದ ಸಕಲ ತತ್ವಕಾರಣವಾಗಿಹುದು. ಇಂತಿದು
ಸೃಷ್ಟಿಯ ಭೇದ. ಇನ್ನು ನಿವೃತ್ತಿಯ ಲಕ್ಷಣ:—ಗುರುತ್ರಯ, ಲಿಂಗತ್ರಯ,
ಜಂಗಮತ್ರಯ, ಪ್ರಸಾದತ್ರಯ, ಪಾದೋದಕತ್ರಯ, ಭಕ್ತಿತ್ರಯ ಸ್ವರೂ
ಪಿನಿಂ, ಅಂಗತ್ರಯ, ಲಿಂಗತ್ರಯ, ಅವಧಾನತ್ರಯ, ಕರಣತ್ರಯ, ಮುಖ
ತ್ರಯ, ಅರ್ಪಿತತ್ರಯ ಸಂಬಂಧದಿಂ ಸರ್ವಾಚಾರಸಾಧನವಾಗಿಹುದು. ಇದ
ನುಚ್ಚರಿಸುವಕ್ರಮವೆಂತೆಂದೊಡೆ —ಬಸವ, ಬಸವ, ಬಸವ, ಬಸವ, ಬಸವ,
ಬಸವ, ಎಂದು ಪುನಃಪ್ರಯೋಗದಿಂದಾರುವೇಳೆ ಸ್ಮರಿಸಲು ನೂರೆಂಟು ಪ್ರ
ಣವವಹವು. ಎಂದಿದನರಿದು ಜಪಿಸಲು, ಶಿವಜ್ಞಾನಸಿದ್ಧಿಯಹುದಕ್ಕೆ ಸಂದೇ
ಹವಿಲ್ಲ. ಬಸವಾಕ್ಷರೋದ್ಧರಣೆಯ ಸಂಬಂಥ ಸಮಾಪ್ತ ಮಂಗಳಮಹಾ.

---

ಶ್ರೀಗುರುಭ್ಯೋನಮಃ.

## ನೂರೆಂಟುಪ್ರಣವೋದ್ಧರಣೆ.

ಇಂತಪ್ಪ ಪರಮಮಂತ್ರಧ್ಯಾನರೂಢನಾದ ಶಿವಯೋಗಿ, ನೂರೆಂಟು ಪ್ರಣವಸಂಬಂಧವನರಿದು ಜಪಿಸುವ ಕ್ರಮವೆಂತೆಂದೊಡೆ:— ಸಚ್ಚಿತ್ಸುಖ ಸ್ವರೂಪವಾದ ಬಸವಾಕ್ಷರತ್ರಯ, ಸುನಾದಬಿಂದುಕಲಾರೂಪವಾದ ಅ ಉಮಾಕ್ಷರತ್ರಯ, ಸತ್ಯಾದಿಲಕ್ಷಣವನುಳ್ಳ ಪ್ರಣವಾದಿ ಪಂಚಾಕ್ಷರವೆಂಬ ದ್ವಾದಶಪ್ರಣವಂಗಳಂ ಒಂಭತ್ತುವೇಳೆ ಪುನಶ್ಚರಣಮಾಡಲು, ನೂರೆಂಟು ಪ್ರಣವಂಗಳಹವು. ಇದನರಿದು ಜಪಿಸಲು ಆತ್ಮತ್ರಯಂಗಳೆಲ್ಲವು ಬಸವಾಕ್ಷರಸ್ವರೂಪವಾದ ಗುರು ಲಿಂಗ ಜಂಗಮ ಸ್ವರೂಪವಹವು. ತನುತ್ರಯಂಗಳೆಲ್ಲವು ಅ ಉ ಮಾಕ್ಷರಸ್ವರೂಪವಾದ ಇಷ್ಟಪ್ರಾಣ ಭಾವಲಿಂಗ ಸ್ವರೂಪವಹವು. ಷಟ್ತತ್ತ್ವಂಗಳೆಲ್ಲವು ಷಡಕ್ಷರೀರೂಪವಾದ ಷಡ್ವಿಧಲಿಂಗ ಸ್ವರೂಪವಹವು. ಮತ್ತಂ. ಸರ್ವತತ್ತ್ವಂಗಳೆಲ್ಲವು ಮಂತ್ರಮಯಲಿಂಗ ತತ್ತ್ವಸ್ವರೂಪವಾಗಿ, ನಿಜಸಮಾಧಿ ಸಿದ್ಧಿಸಿ, ಪರಶಿವಯೋಗ ಸಂಭವಿಸುವುದು. ನೂರೆಂಟು ಪ್ರಣವೋದ್ಧರಣೆಯ ಸಂಬಂಧ ಸಮಾಪ್ತಮಂಗಳಮಹಾ.

---

ಗುರುಭ್ಯೋನಮಃ.

## ಅಧಃಕುಂಡಲಿ ಶಕ್ತಿ ಪ್ರಣವೋದ್ಧರಣೆ.

ಇಂತಪ್ಪ ಶಿವಮಂತ್ರಧ್ಯಾನಪರಾಯಣನಾದ ಶಿವಯೋಗಿಯ ಕುಂಡಲಿಯೆಂಬ ಮಹಾನಾಡಿಯೆನಿಪ ನಾಭಿಪ್ರದೇಶದಲ್ಲಿ ನೆಲಸಿ, ನಿವೃತ್ತಿಮುಖವಾಗಿರ್ಪ ಕುಂಡಲಿಶಕ್ತಿಯ ಪ್ರವೃತ್ತಿಲಕ್ಷಣವೆಂತೆಂದೊಡೆ:—ಕರ್ಮಾರಣ್ಯಪ್ರವೇಶಿಯಾಗಿ, ಜರಾ ಮರಣ ಭೇದೋಪದ್ರವರೂಪವಾಗಿ, ಸಮಸ್ತ ವಿಶ್ವದಲ್ಲುಳ್ಳ ಪಶುಪ್ರಾಣಿಗಳ ಮುರಿದು ನುಂಗುತ್ತಿಹ ಕಾಲನೆಂಬ ವ್ಯಾಘ್ರವೆ ಮುಖ, ಮುಂಡಣ ಬಲದ ಪದ, ಉರಗಾಕಾರ ವಾಹನರೂಪವಾಗಿ ಭವಾರಣ್ಯಪ್ರವೇಶಿಯಾಗಿ ಸಂಚಲಗುಣಯುತಸಂಬಂಧಿಯಾಗಿ, ವೃಥಾ ಭ್ರಾಂತಿಲಕ್ಷಣೆಯಾಗಿ, ಭಿನ್ನದೃಷ್ಟಿಗೆ ಸ್ವರೂಪಿಣಿಯಾಗಿ, ಪ್ರತಿಪತ್ತಾಗು

ತ್ತಿಹ ಸಂಸಾರಸುಖವನು, ವಿಷಯಾಸಾರದ ರಸೋದಕವ ಕೊಂಡು, ಜಗದಗಲಕ್ಕೆ ಹರಿದು, ಮೋಹವೆಂಬ ಮುಖದಿಂ, ವಿಶ್ವವನಗಿದಗಿದು ತಿನು ತಿಹ, ಮಾಯೆಯೆಂಬ ಹರಿಣಿಯ, ಶಿರ, ಶೃಂಗ, ಕರ್ಣ, ನಯನ, ಹಿಂದಣ ಎ ಡದ ಪಾದದಾಕಾರವಾಹನಸ್ವರೂಪವಾಗಿ,ಅಹಂಕಾರವೆಂಬ ಪರ್ವತವನ್ನೇರಿ ನಿಂದು ದುರ್ವಿಮುಖಾವಲೋಕನದಿಂ ದುರ್ಮದಗ್ರಾಹಕ ಚಿತ್ತವಿಭ್ರಾಂತಿ ಯನುಳ್ಳ, ಮೋಹವೆಂಬ ಸಿಹ್ಮವೇ ಮುಂದಣ ಎಡದಪಾದ, ಅಡಿಹೊಟ್ಟೆಯ ನಡುವಿನಾಕಾರವಾಹನ ನರೂಪವಾಗಿ,ಸಂಸಾರ ಪಾಶದಿಂ ಬಿಗಿವಡೆದು ಪರ ತಂತ್ರವಾದ, ಜೀವವೆಂಬ ಪಶುವೆ ಹಿಂದಣ ಬಲ ಪಾದ, ಮೇಲೆ ಕೆಚ್ಚಲಿನಾ ಕಾರ ವಾಹನರೂಪವಾಗಿ, ಸಂಖ್ಯಾವಿಷ ಸಂಬಂಧಿಯಪ್ಪ, ಕುಂಡಲ ಭುಜಂಗ ವೆ ಬಾಲವಾಗಿ, ಪಾದಾದ್ಯವಯವಂಗಳು ಮನುಜಾಕಾರವಾಗಿ, ನರಸತಿ ಯೋ ನಾಗಕನ್ನಿಕೆಯೋ ಕಿನ್ನರಸ್ತ್ರೀಯೋ ಯಕ್ಷವನಿತೆಯೋ ಮೃಗಕುಲ ಜೆಯೋ ಇದಾವ ಸತಿಯೋ ಎಂದು ವಿವರಿಸಲು ವಶವಲ್ಲದ, ದೇವತೆಯೆ ಮ ನ ಷ್ಯಾಕಾರವಪ್ಪ ವಿಚಿತ್ರರೂಪನಿಂ, ಕಾಮರೂಪಿಯಾಗಿ ಧೂರ್ತ ನಿಗ್ರಹ ದಿಂ ನಾನಾಚಾರಿತ್ರವ ಮುಂದುಗೊಂಡು, ಲೋಕಮೋಹಿನಿ,ಜಗದ್ವ್ಯಾಪಿನಿ, ಅಂತರ್ಮನೋರೂಪಿಣಿಯಾಗಿರ್ಪಳೀಕುಂಡಲಿ ಶಕ್ತಿಯ ಸ್ವರೂಪಗುಣಲ ಕ್ಷಣ ಸಬಂಧವೆಂತೆನಲು,ಕ್ರೋಧವೆರಸಿದ ದುರ್ಮೋಹವೆ ಮುಖ, ದುರ್ವಿವೇ ಕವೆ ಶಿರಸ್ಸು, ದುರ್ವಾಸನಾಸ್ವೀಕಾರವೇ ನಾಸಿಕ, ದುರ್ಮುಕ್ತಿಯೇ ಮೂ ಗುತಿ, ದುರಪೇಕ್ಷೆಯೇ ಜಿಹ್ವೆ, ಸಂಕಲ್ಪ ವಿಕಲ್ಪಾದಿ ಗುಣಂಗಳೇ ದಂತಪಜ್ತಿ ಗಳು, ಕರಣಮಥನಂಗಳೇ ಕೋರೆದಾಡೆಗಳು, ಜ್ಞಾನಾಜ್ಞಾನಂಗಳೇ ನೇ ತ್ರಂಗಳು, ಶ್ರುತಾಶ್ರುತಂಗಳೇ ಕರ್ಣಂಗಳು, ಆಚಾರ ಅನಾಚಾರಂಗಳೇ ಕರ್ಣಾಭರಣಂಗಳು, ದುರಹಂಕಾರ ಮಮಕಾರಂಗಳೇ ಕೇಡುಗಳು, ಅಧೃಢ ವೇ ಕಂಠ, ಅವ್ಯಕ್ತನಿಷ್ಠೆಯೇ ಕಂಠಾಭರಣ ಸ್ವರೂಪ, ಸೂತ್ರವಿಡಿದಿರ್ಪ ಅಕ್ಷರಮಾಲೆಯೇ ಕೊರಳಹಾರ,ಕುಚಿತ್ತಕುಬುದ್ಧಿ, ಕುಮನ, ಕುಭಾವವೇ ಕರ ಚತುಷ್ಟಯಂಗಳು, ತದ್ಗುಣದೋಷಂಗಳೇ ಹಸ್ತಾಭರಣಂಗಳು, ಅಮೃತ ವಿಷಪೂರಿತವಾದ ಪಾತ್ರಾಪಾತ್ರಂಗಳೆ ಮೇಲಣ ಹಸ್ತದ್ವಯದ ಕುಂಭಂಗ ಳು, ಸತ್ಯವ ಮಿಥ್ಯವ ಮಾಡಿ, ಶುಭಾಶುಭಂಗಳ ಲಿಖಿಸುವ ಮೂಲಾಹಂಕಾರ

ವೇ ಬಲದ ಅಧೋಹಸ್ತದ ಕಂಠ, ಪ್ರಾರಬ್ಧಕಲ್ಪಿತವಾದ ಪ್ರಕೃತಿಪಿಂಡ ಸಂಬಂಧವಪ್ಪ ಘಣೆಯ ದುರ್ಲೇಖನವೆ ಎಡದ ಅಧೋಹಸ್ತದ ಶಾಸನಪತ್ರ, ಇಹಪರಭೋಗಾ ಭೋಗಸಂಪತ್ತು,ಕರ ಸಂಪೂರಿತವಾದ ಶುಭಾಶುಭ ಕರ್ಮಂಗಳೇ ಸ್ತನಂಗಳು, ಅಲ್ಲಿಯ ಪ್ರಪಂಚಾಧ್ಯಾಸವೇ ಕಂಚುಕ, ತತ್ಪ್ರಪಂಚಾವಲಂಬನ ಗರ್ಭೀಕೃತವೇ ಗರ್ಭ, ತನ್ಮಧ್ಯಸ್ಥಿತಿಯೇ ನಾಭಿ, ಆಸ್ಥಿತಗತಿಸಂಧಾನರತಿಯೇ ನಡುವು, ಲೋಕೋತ್ಪತ್ತಿ ಹೇತುವಿನ ಗುಣವೆ ಗೋಪ್ಯಾಂಗ, ವರ್ಣಾಂಶಿಕಗುಣ ಪ್ರಪಂಚಲಕ್ಷಣವನುಳ್ಳ ಅಜ್ಞಾನವೇ ಉಟ್ಟ ಪಟ್ಟಾವಳಿ ಸಂಪುಟವಸ್ತ್ರ, ದುರ್ಭಾವ ಪ್ರಕೃತಿಯೇ ಮಧ್ಯಾವರಣ, ದುರಾಚಾರ ದುಶ್ಚರಿತ್ರವೇ ಕೀಳು ಮೇಲಣ ಚರಣದ್ವಯಂಗಳು, ತತ್ಸಂಬಂಧವಾದ ಕುಟಿಲ ಕುಹಕ ಗುಣದೋಷಂಗಳೆ ಪಾದ್ಯಾಭರಣಂಗಳು, ಸಾಧಕರ ಸಾಧಿಸುವ ವಿಜಯ ವಿಶಾಲ, ಪ್ರತಾಪಗುಣವೆ ಬಿರುದಿನ ಕಾಲಪೆಂಡೆ, ನಿಲುವ ತೊಡರು,ಬಾಹುಲಿಗಳು, ಕ್ರೋಧವೆಂಬ ಹುಲಿ,ಮೋಹವೆಂಬ ಸಿಹ್ಮ,ಜೀವವೆಂಬ ಪಶು,ಮಾಯೆಯೆಂಬ ಹರಿಣಿ, ಈ ನಾಲ್ಕುವಾಹನಂಗಳು, ಅಧರ್ಮ, ಅಜ್ಞಾನ, ಅವೈರಾಗ್ಯ, ಅನೈಶ್ವರ್ಯ, ಈ ನಾಲ್ಕುಚರಣಂಗಳು,!ಭೋಕ್ತ ಕರ್ಮಸ್ಥಿತಿಯೇ ಕೆಚ್ಚಲು, ಧರ್ಮ, ಅರ್ಥ, ಕಾಮ ಮೋಕ್ಷಂಗಳೇ ಸ್ತನಂಗಳು, ಆ ಸ್ತನ್ಯ ಸ್ವೀಕೃತರಪ್ಪ ಜೀವರಾಶಿಗಳೇ ಭವಾಂಬುರಾಶಿ ಕ್ರೀಡಿತಮತ್ಸ್ಯಂಗಳು. ಮತ್ತಂ. ಸಂಭಾವಿಷಸಂಬಂಧವಪ್ಪ ಚತುರ್ದಶ ಇಂದ್ರಿಯಂಗಳೇಮುಖವಾಗಿ, ಅರಿಷಡ್ವರ್ಗಂಗಳೇ ಒಡಲಾಗಿ,ಪ್ರಕೃತಿ ಗುಣವೇ ಬಾಲವಾಗಿ, ಪಂಚಭೂತಗುಣ ಮನೋಬುದ್ಧಿ ಅಹಂಕಾರವೆಂಬ ಅಷ್ಟಪ್ರಕೃತಿಯಿಂ ಪಂಚತನ್ಮಾತ್ರಪ್ರಕೃತಿ ಮಹತ್ತ್ವವೆಂಬ ಸಪ್ತ ಕುಟಿಲಾಕಾರದಿಂ, ದಾಹ್ಯಲೇಖನದಂತೆ, ಚಾಪದಟ್ಟೆನವೋಲ್, ಬಾಲವ ಬ್ರಹ್ಮನಾಡಿಯತ್ತನೀಡಿ,ನಾಭಿಯೊಳು ತೆಕ್ಕೆಯನಿಕ್ಕಿ, ಮುಖವ ಹರಿದ್ವಾರದಲ್ಲಿರಿಸಿ,ಜನನಹೇತುವಿಂ ನಾದಬಿಂದುರೂಪವಾದ ಕಾಳಕೂಟವಿಷವನುಗುಳಿ, ಸಂಹಾರಕಾರಣವಾಗಿ ಲೋಕೋಪದ್ರವ ಮಾಡುತ್ತಿಹ ಬಾಲವಾಗಿರ್ಪ, ಕುಂಡಲಿ ಸರ್ಪನ ತೊಡೆಯ ಕಣಿಕಾಲಸಂದಿಯಲ್ಲಿ ಸಿಕ್ಕಿಸಿ, ತಲೆಯೆತ್ತಲೀಯ್ಯದೆ, ಅಜ್ಞಾನವೆಂಬ ಅಲಗಿನಿಂದಳಿಕಿಸಿಕೊಂಡಿರ್ಪಳು. ಮರಣ ರುಜೆ ರೂಪವಾದ ಕಾಲಮೃತ್ಯು, ಅಪಮೃತ್ಯುಗಳೆರಡು ಎಡಬಲದ

ಶಿರೋದಯಂಗಳು, ಮತ್ತಮಿದನಾವರ್ಜಿಸಿಕೊಂಡು, ವಿಷಮ ವಿಷಯ ಸಂ ಸಾರಜಲದಿಂ, ಷಡೂರ್ಮಿ,ಷಡ್ಭ್ರಮೆ, ಷಡ್ಭಾವ ವಿಕಾರ ಸಪ್ತ ಧಾತುವ್ಯಸ ನಂಗಳೆಂಬ ಪೀನ! ತರಂಗಬುದ್ಬುದಸ್ಥಿತಿಕರ ವರ್ತುಲಂಗಳಿಂ, ಮೂಲಾಹಂ ಕಾರವೆಂಬ ಮಹಾಕಮಠದಿಂ, ಅರಿವುಮರವೆಗಳೆಂಬ ತಿಮಿತಿಮಿಂಗಿಲಂಗಳಿಂ, ಅರಿಷಡ್ವರ್ಗಂಗಳೆಂಬ ಜಲಸರ್ಪ, ಜಲಗ್ರಾಹ, ಕರ್ಕಾಟಕ, ಮಂಡೂಕ ಕಮಠ, ಖಡ್ಗ, ಕಾಳ್ಕಡಲಿಂ ಸಕಲಜೀವರಾಶಿಗಳೆಂಬ ಮೀನ್ಗಳಿಂ, ಕಾಲ ಕರ್ಮ ಕಾಮಕಾರೆಂಬ ವ್ಯಾಧರಿಂ, ಜಗಜ್ಜಾಲವೆಂಬ ಬೈತ್ರಂಗಳಿಂ,ಪುಣ್ಯಪಾ ಪಂಗಳೆಂಬ ಶಿರಂಗಳಿಂ ಗರ್ಭೋದಕಶರಧಿಯಂತೆ ಭವಸಮುದ್ರದಂತೆ ಎಸೆಯುತ್ತಿಹುದು.

ಇಂತಪ್ಪ ಕುಂಡಲಿಶಕ್ತಿ ನಿವೃತ್ತಿಮುಖವನೆಯ್ದಿ, ಮಂತ್ರಶಕ್ತಿ ಯಾದ ವಿವರವೆಂತೆಂದೊಡೆ:— ಅಕಾಲ ಮಾಯಾ ಮೋಹ ಜೀವಜನ ಸಪರ್ಾಕಾರವಳಿದು ನಿತ್ಯ ನಿರ್ಮಾಯ ನಿರ್ಮೋಹ ಸಜೀವ ಸುಜನ, ಸ ತ್ಪ್ರಾಣವಾಕಾರವಾದ ಸ್ವರೂಪಲಕ್ಷಣಸಂಬಂಧವೆಂತೆನಲು, ಪರಮಶಾಂ ತಿ ರತಿಲಾಸ ಮೋಹನವೇ ಮುಖ, ಸದ್ವಿವೇಕವೇ ಶಿರಸ್ಸು, ಶಿವಸದ್ವಾಸನಾ ಸ್ವೀಕಾರವೇ ನಾಸಿಕ, ನಿತ್ಯ ನಿಜ ಮುಕ್ತಿಯೇ ಮೂಗುತಿ, ಚಿದಪೇಕ್ಷೆಯೇ ಜಿಹ್ವೆ, ನಿಸ್ಸಂಕಲ್ಪ ನಿರ್ವಿಕಲ್ಪಾದಿ ಸದ್ಗುಣಂಗಳೆ ದಂತಪಜ್ತಿಗಳು, ಚಿ ತ್ಕಾರಣ ಮಥನಂಗಳೆ ಕೋರೆದಾಡೆಗಳು, ಸುಮನ ಸುಜ್ಞಾನಮಹದಜ್ಞಾ ನಂಗಳೇ ನಯನಂಗಳು.ಸದ್ಬೋಧೆ ನಿರ್ಬೋಧೆಗಳೇ ಕರ್ಣಂಗಳು, ಆಮಾರ್ಗ ಕ್ರಿಯೆಯ ಮೀರಿದ ಕ್ರಿಯಾಚಾರಂಗಳೇ ಕರ್ಣಾಭರಣಂಗಳು, ನಿರಹಂಕಾರ ಮಮಕಾರಂಗಳೆ ಕೋಳ್ಗಳು, ಸುಧೃಢವೆ ಕಂಠ, ನಿಜನಿಷ್ಠೆಯೇ ಕಂಠಾಭರ ಣ,ನಾದಸೂತ್ರವಿಡಿದಿರ್ಪ ಮಂತ್ರಾಕ್ಷರಮಾಲೆಯೇ ಕೊರಳಹಾರ,ಸುಚಿತ್ತ ಸುಬುದ್ಧಿ ಸುಮನ ಸದ್ಭಾವವೇ ಕರಚತುಷ್ಟಯಂಗಳು, ಸದ್ಗುಣಪ್ರಭಾ ವಂಗಳೆ ಹಸ್ತಾಭರಣಂಗಳು, ಪರಮಾಮೃತ ಚಿದಮೃತ ಪೂರಿತವಾದ ಪಾ ತ್ರಾಪಾತ್ರಂಗಳೆ ಮೇಲಣ ಹಸ್ತದ್ವಯದ ಕುಂಭಗಳು,ನಿರ್ಲಿಖಿತವ ಲಿಖಿಸು ವ ಮೂಲಜ್ಞಾನವೇ ಬಲದ ಹಸ್ತದ ಕಂಠ, ಪ್ರಾರಬ್ಧ ಕಲ್ಪಿತವಳಿದ ಚಿತ್ಪಿಂಡ 'ಸಂಬಥವಪ್ಪ ಫಣೆಯ ಪಂಚಾಕ್ಷರಲೇಖನವೇ ಎಡದ ಹ

ಸ್ತ್ರದ ಶಾಸನಪತ್ರ, ಭಕ್ತಿರಸಾಮೃತ ಪೂರಿತವಾದ ಸತ್ಕರ್ಮ ನಿಷ್ಕರ್ಮಂಗಳೆ ಸ್ತನಂಗಳು, ಅಲ್ಲಿಯ ನಿಷ್ಪ್ರಪಂಚ ಧ್ಯಾನವೆ ಕಂಚುಕ, ತನ್ನಿಷ್ಪ್ರಪಂಚಮೂಲಜ್ಞಾನ ಗರ್ಭೀಕೃತವೇ ಗರ್ಭ, ತನ್ಮಧ್ಯಸ್ಥಿತಿಯೇ ನಾಭಿ, ಆ ಸ್ಥಿತಿ ಗತಿ ಸಂಧಾನರತಿಯೇ ನಡುವು,ನಿಜೋತ್ಪತ್ತಿಹೇತು ಸಾಧನಗುಣವೇ ಗೋಪ್ಯಾಂಗ, ಷಡ್ವಿಧ ಭಕ್ತಿಯುಕ್ತವಾದ ಜ್ಞಾನವೆ ಉಟ್ಟ ಪಟ್ಟಾವಳಿ ಸಂಪುಟವಸ್ತ್ರ, ಸದ್ಭಾವ ಪ್ರಕೃತಿಯೇ ಮಧ್ಯಾಭರಣ, ಸದಾಚಾರ ಸಚ್ಚರ್ಯವೆ ಚರಣದ್ವಯಂಗಳು, ತತ್ಸಂಬಂಧವಾದ ನಿಷ್ಕಪಟ ನಿಷ್ಕುಹಕ ಗುಣಪ್ರಭಾವಂಗಳೇ ಪಾದ್ಯಾಭರಣಂಗಳು, ಅಸಾಧ್ಯಸಾಧಕ ವಿಜಯ ವಿಶಾಲ ಪ್ರತಾಪಗುಣವೆ ಬಿರುದಿನ ಕಾಲಪೆಂಡೆ ನಿಲುವದೊಡರು, ಬಾಹುಲಿಗಳು, ನಿಷ್ಕ್ರೋಧ,ನಿರ್ಮೋಹ, ಸಜೀವ,ನಿರ್ಮಾಯೆ ಈ ನಾಲ್ಕು ವಾಹನಂಗಳು, ಸಧರ್ಮ, ಸುಜ್ಞಾನ ಪರಮವೈರಾಗ್ಯ ಮಹದೈಶ್ವರ್ಯ ಈ ನಾಲ್ಕುಚರಣಂಗಳು, ಅಭೋಕ್ತೃ ಕರ್ಮಸ್ಥಿತಿಯೇ ಕೆಜ್ಜಲು, ಶಿವಧರ್ಮ ಶಿವಜ್ಞಾನಾರ್ಥ ಶಿವರತಿಕಾಮ ಶಿವಶುಭ ಮೋಕ್ಷಂಗಳೆ ಸ್ತನಂಗಳು, ಆ ಸ್ತನ್ಯಪಾನ ಸ್ವೀಕೃತರಪ್ಪ ಸಚ್ಚಿದಾತ್ಮಕರೆ ಚಿತ್ಸುಧಾಂಭೋರಾಶಿ ಕ್ರೀಡಿತಮತ್ಸ್ಯಂಗಳು,ಇಂತಾಗಲು ದಂಡಾಹತವಾದ ಭುಜಂಗದಂತೆ ಸುಪ್ತವಾದ ಕುಂಡಲಿಸರ್ಪವನು,ಶಿವಯೊಗಸಾಧನ ಸಂಪತ್ಕರದಿಂ,ಪ್ರಬಲವಪ್ಪ ಜ್ಞಾನಾಗ್ನಿಮುಖದಿಂದೆಚ್ಚತ್ತು ಊರ್ಧ್ವಮುಖನಾಗಿ ಸತ್ಪ್ರಣವ ಜ್ಞಾನಕುಂಡಲಿಯೆನಿಸಿ, ಅಗ್ನಿಮಂಡಲದಿಂ ಸೂರ್ಯಮಂಡಲಕ್ಕಡರಿ, ಅಲ್ಲಿಂದ ಚಂದ್ರಮಂಡಲವನೇರಿ, ಅಲ್ಲಿಂದ ಬಂದು ತ್ರಿಕೂಟಾದ್ರಿಯಲ್ಲಿ ನಿಂದು, ಮಂತ್ರೋಚ್ಚರಿತ ಲೋಲಾನಂದ, ಬ್ರಹ್ಮನಾದಾನುಷಂಗಿಯಾಗಿ, ಪ್ರಣವಘೋಷದಿಂ ಪಶ್ಚಿಮಗಾಮಿಯಾಗಿ ಖಗರಂಧ್ರಸ್ಥಾನಮಂ ಸಾರಿ, ಫಣಾಮಣಿ ಪ್ರಜ್ವಲಿಸುತ್ತ, ಪರಮತೇಜೋರಾಶಿಯೆನಿಸಿಪ್ಪ, ಪರತತ್ವದೊಳಗೆ ಬೆರೆದು, ಮನಸ್ಸಮಾಧಿಯನೆಯ್ದಿಪ್ಪುದು. ಮತ್ತಮದನಾವರ್ಜಿಸಿ ಪೂರ್ವೋಕ್ತಕ್ರಮದಂತೆ ನಿವೃತ್ತಿಮುಖವನುಳ್ಳ ಸರ್ವಸದ್ಗುಣ ಸಂಪತ್ಸಂಭ್ರಮದಿಂ ಚಿತ್ಸಮುದ್ರವೆಸೆವುತಿಪ್ಪುದು. ಊರ್ಧ್ವಕುಂಡಲಿ ಶಕ್ತ್ಯುದ್ಧರಣೆಯ ಸಂಬಂಧ ಸಮಾಪ್ತ ಮಂಗಳಮಹಾ.

ಗುರುಭ್ಯೋನಮಃ.

# ಜ್ಞಾ ನ ಚ ಕ್ರೋ ದ್ಧ ರ ಣೆ

ಇಂತಪ್ಪ ಶಿವಯೋಗಿಯ ಶಿವಜ್ಞಾನಚೈತನ್ಯವೇ ಅಕ್ಷರಜ್ಞಾತ್ವಾದಿ ಭೇದಂಗಳನೊಳಕೊಂಡು ವ್ಯಾವೃತ್ತವಾಗಿರ್ಪ ಕಾರಣದಿಂ ಜ್ಞಾನಚಕ್ರವೆನಿಸಿತು. ಇದನುದ್ಧರಿಸುವ ಕ್ರಮವೆಂತೆಂದೊಡೆ:—ನೂರನಾಲ್ವತ್ತುನಾಲ್ಕಂಗುಲ ಪಮಾಣಿನ ತ್ರಿಚಕ್ರ ಕ್ಷೇತ್ರಮಂ ಚತುರಾಕಾರವಾಗಿ ಬರೆದು, ಅದರ ಮಧ್ಯದಲ್ಲಿ ಒಂದು ಕುರುಹನಿರಿಸಿ,ಅದರಮೇಲೆ ಬಳಸಿ, ಅಂಗುಲ ಅಂಗುಲ ಪ್ರಮಾಣದಲ್ಲಿ, ಷಡ್ವಿಧ ಕುರುಹುಗಳಂ ಮಾಡಿ, ಅಲ್ಲಿ ಷಟ್ಕೃತಿಯಂ ಬರೆದು, ಅದರೊಳು ಪೂರ್ವದಿಕ್ಕು ಬಳಿಗೊಂಡು ಬಲಪ್ರದಕ್ಷಿಣವಾಗಿ ವ ಮ ಬ ಅ ಸ ಉ ಎಂಬ ಷಡ್ವರ್ಣಂಗಳಂ, ಮಧ್ಯದಲ್ಲಿ ಹಕಾರವಂ,ಅದರೆಡಬಲದಲ್ಲಿ ಓಕಾರ ಕ್ಷಕಾರಂಗಳಂ ಬರೆವುದು.ಬಳಿಕ ಷಟ್ಕೋಣಗಳ ಮೇಲೆ:ನಾಲ್ಕುನಾಲ್ಕಂಗುಲ ಪ್ರಮಾಣೋನ್ನತಮಾದ ಷಡ್ವಿಧ ಭವನಂಗಳಂ, ಮೇಲೆರಡೆರಡು ರೇಖೆಗಳ ಪೂರ್ಣಮಾಗಿ ಕೆಳಗು ಬರೆ, ಕೆಳಗೆರಡೆರಡು ರೇಖೆಗಳ ತ್ರಿಭಾಗದೊಳಗೊಂದು ಭಾಗ ಕಡಿಮೆಯಾಗಿ ಮೇಲು ಬರೆ ಬರೆಯಲು,ಅವರ ಮಧ್ಯದಲ್ಲಿ ಆರೆಸಳು ಪುಟ್ಟುವುವು. ಬಳಿಕವರೊಳು,ಹ್ರಃ ಹ್ರೌಂ ಹ್ರೈಂ ಹ್ರುಂ ಹ್ರಿಂ ಹ್ರಂ ಎಂಬ ಷಡ್ವರ್ಣಗಳಂ ಬರೆವುದು. ಮತ್ತಮಾ ಷಡ್ವಿಧ ಭವನಂಗಳಲ್ಲಿ ಮೂಲೆಮೂಲೆಗಳೆರಡೆವಿಡದಂತೆ, ತ್ರಿಕೋಣ ಚತುರಾಕಾರದ ಮನೆಗಳ ದ್ವಾದಶಮಪ್ಪಂತೆ ಬರೆದವರಲ್ಲಿ, ಬಲನೆಡ ಪ್ರದಕ್ಷಿಣವಾಗಿ, ಓಂಕಾರಾದಿ ಮಿಶ್ರಷಡ್ವರ್ಣಂಗಳ ದ್ವಾದಶಮಪ್ಪಂತೆ,ಅವರ ಬಳಸಲ್ಲಿ ಮ ಅ ಉ ಎಂಬಕ್ಷರತ್ರಯಂಗಳ ಆರಾರಪ್ಪಂತೆ ಬರೆಯಲು, ಎಪ್ಪತ್ತೆರಡು ಮನೆಗಳಿಗೆ ಮಿಶ್ರಾಕ್ಷರಂಗಳು ನೂರೆಂಟಹವು. ಬಳಿಕದರ ಸಂದುಸಂದುಗಳಲ್ಲಿ ಅಡ್ಡಚೌಕದ ಮನೆಗಳಾರನು, ಅವರ ಮಧ್ಯದಲ್ಲಿ ಒಂಭತ್ತೊಂಭತ್ತು ಮನೆಗಳಂ ಬರೆದವರಲ್ಲಿ, ಆ ಮಿಶ್ರಷಡ್ವರ್ಣಂಗಳಂ ದ್ವಾದಶಮಪ್ಪಂತೆ ಬರೆಯಲು ಐವತ್ತುನಾಲ್ಕು ಮನೆಗಳಿಗೆ ಮಿಶ್ರಾಕ್ಷರಂಗಳೆಪ್ಪತ್ತೆರಡಹವು.ಬಳಿಕ ಚಕ್ರದ ಮೂಲೆಮೂಲೆಗಳ ಬಳಸಿ ಮಧ್ಯದಲ್ಲಿ ಒಂದಂಗುಲದಗಲ ಪ್ರಮಾಣವಪ್ಪಂತೆ ರೇ

ಖೆಗಳ ತೆಗೆಯಲು ಹನ್ನೆರಡು ಮೂಲೆಗಳು ಪುಟ್ಟುವವು. ಅವರ ಮಧ್ಯದಲ್ಲಿ ನೂರೆಂಟುಮನೆಗಳಂ ಬರೆದವರೊಳು, ಲಕಾರಾಂತರ್ಗತವಾದ ಳಕಾರವೊಂದ ನುಳುಹಿ, ಅಕಾರದ್ವೈಪತ್ತುವರ್ಣಂಗಳಂ ಲೋಮವಿಲೋಮದಿಂ ಮಾಯಾಖ್ಯಂಗೂಡಿ,ಅಷ್ಟೋತ್ತರ ಶತಾಕ್ಷರಂಗಳಂ ಬರೆವುದು. ಮತ್ತಮಾಚೌಕದ ಮೂಲೆಮೂಲೆಗಳಲ್ಲಿ ಎರಡೆರಡು ಮನೆಗಳಂ ರಚಿಸಿ, ಅವರಲ್ಲಿ ಪೂರ್ವ ಅಗ್ನಿ, ಡಿಕ್ಕಿನಮನೆಮೊದಲುಗೊಂಡು ಪರಿವಿಡಿಯಿಂ ಬ ಸ ವ ಅ ಉ ಮ ಹ ಕ್ಷ ಎಂಬ ಅಷ್ಟಾಕ್ಷರಂಗಳಂ ಬರೆವುದು. ಇಲ್ಲಿಗೆ ಯಂತ್ರಾಕ್ಷರನ್ಯಾಸಮುಗಿಯಿತು.

ಇನ್ನು ತತ್ವಮಂತ್ರ ಕುಳಸ್ಥಲ ಸಂಬಂಧವೆಂತೆಂದೊಡೆ:—ಮಧ್ಯದ ಹಕಾರ ಕ್ಷಕಾರ ಬಕಾರಂಗಳೆ ನಿರಂಜನ ಶೂನ್ಯ ನಿಷ್ಕಲತತ್ವ, ಶಕ್ತಿತ್ರಯ, ಪರ ಕಲಾನಾದ ಬಿಂದುಪ್ರಣವತ್ರಯ, ಕೇವಲ ಲಿಂಗಾಂಗಸಂಬಂಧ ತ್ರಯಾತ್ಮಕವಾಗಿಹವು, ಇನ್ನು ಷಟ್ಕೋಣೆಗಳ ನ್ಯಾಸಾಕ್ಷರಂಗಳೊಳಗೆ, ಪ ಬ ಸ ಎಂಬಕ್ಷರತ್ರಯಂಗಳು ತತ್ವತ್ರಯ, ಆತ್ಮತ್ರಯ, ಚಿತ್ಕಲಾನಾದಬಿಂದು ಮಂತ್ರತ್ರಯ ಲಿಂಗತ್ರಯ ಸ್ವರೂಪವಾಗಿಹವು, ಮ ಅ ಉ ಎಂಬಕ್ಷರತ್ರಯಂಗಳೇ ಶಕ್ತಿತ್ರಯ ತನುತ್ರಯ ಸತ್ಕಲಾನಾದಬಿಂದು ಪ್ರಣವತ್ರಯ, ಅಂಗತ್ರಯ ಸ್ವರೂಪವಾಗಿಹವು, ಇನ್ನುಮಧ್ಯದಳದ ನ್ಯಾಸಾಕ್ಷರಂಗಳೊಳಗೆ,ಹ್ರಂಕಾರಾದಿ ಷಡ್ವರ್ಣಂಗಳೇ ಷಟ್ಸದಾಖ್ಯ, ಷಡಾತ್ಮ, ಷಟ್ಪ್ರಸಾದಮಂತ್ರ, ಷಡ್ವಿಧಲಿಂಗ ಸ್ವರೂಪವಾಗಿಹವು, ಓಂಕಾರಾದಿ ಷಡ್ವರ್ಣಂಗಳೆ ಷಟ್ಕಲೆ, ಷಡ್ಭೂತ, ಷಡಕ್ಷರಪ್ರಣವ ಷಟ್‌ಸ್ಥಲಾಂಗ ಸ್ವರೂಪವಾಗಿಹವು. ಇನ್ನು ನೀಳಚೌಕದ ಷಡ್ವಿಧ ಭವನಮಧ್ಯಸವಾದ ಮೂಲೆಮೂಲೆಯ ಮನೆಯಲ್ಲಿ ನ್ಯಾಸವಾಗಿರ್ಪ ಬಲಪ್ರದಕ್ಷಿಣದ ಮ ಅ ಉ ಎಂಬಕ್ಷರತ್ರಯಂಗಳೆ ಲಕ್ಷಣತ್ರಯ, ವರ್ಣತ್ರಯ, ಗುಣತ್ರಯ, ಮೂರ್ತಿತ್ರಯ, ತತ್ವತ್ರಯ, ಶಕ್ತಿತ್ರಯವೆಂಬ ಹದಿನೆಂಟು ತತ್ವ, ಹದಿನೆಂಟು ಮಂತ್ರ, ಹದಿನೆಂಟುಲಿಂಗಸ್ವರೂಪವಾಗಿಹವು. ಎಡಪ್ರದಕ್ಷಿಣದ ಅಕ್ಷರತ್ರಯಂಗಳೆ, ತನುತ್ರಯ, ತನ್ಮಾತ್ರತ್ರಯ, ಇಂದ್ರಿಯತ್ರಯ, ಚೇತನತ್ರಯ, ಕರಣತ್ರಯ, ಭಾವತ್ರಯವೆಂಬ ಹದಿನೆಂಟು ಕರಣ, ಹದಿನೆಂಟು ಪ್ರಣವ, ಹದಿನೆಂಟು ಅಂಗಸ್ವರೂಪವಾಗಿಹವು. ಇನ್ನು ನಡುವಣ ಒಂಭತ್ತೊಂಭತ್ತು

ಮನೆಗಳ ನ್ಯಾಸಾಕ್ಷರಂಗಳೊಳಗೆ ಬಲಪ್ರದಕ್ಷಿಣದ ಮಿಶ್ರಷಡ್ವರ್ಣಂಗಳೆ ಷಡ್ಲಕ್ಷಣ, ಷಡ್ವರ್ಣ, ಷಡ್ಗುಣ, ಷಣ್ಮೂರ್ತಿ, ಷಟ್ತತ್ವ, ಷಡ್ಭಕ್ತಿಗಳೆಂಬ ಮೂವತ್ತಾರುತತ್ವ, ಮೂವತ್ತಾರುಮಂತ್ರ, ಮೂವತ್ತಾರುಲಿಂಗ ಸ್ವರೂಪವಾಗಿಹವು.ಎಡಪ್ರದಕ್ಷಿಣದ ಮಿಶ್ರಷಡ್ವರ್ಣಂಗಳೆ ಷಡ್ವಿಧ ಕರ್ಮೇಂದ್ರಿಯ, ಷಡ್ವಿದವಿಷಯ, ಷಡ್ವಿಧ ಜ್ಞಾನೇಂದ್ರಿಯ, ಷಡ್ವಿಧವಾಯು, ಷಡ್ವಿಧಕರಣ, ಷಡ್ವಿಧಭಾವ, ಎಂಬ ಮೂವತ್ತಾರು ಕರಣ, ಮೂವತ್ತಾರುಪ್ರಣವ, ಮೂವತ್ತಾರು ಅಂಗ, ಸ್ವರೂಪವಾಗಿಹವು. ಇಂತಿವನೊಟ್ಟವಿಸಲು ನೂರೆಂಟು ತತ್ವಕರಣ,ನೂರೆಂಟು ಮಂತ್ರಪ್ರಣವ, ನೂರೆಂಟು ಲಿಂಗಾಂಗಗಳಾದುವು.

ಇನ್ನು ಇದೇ ;ಮರ್‍ಯ್ಯಾದೆಯಲ್ಲಿ ಅಷ್ಟಚಾಕದ ಷಡ್ವಿಧಭವನಂಗಳ ಒಂಬತ್ತೊಂಬತ್ತು ಮನೆಗಳಲ್ಲಿ ನ್ಯಾಸವಾಗಿರ್ಪ ಮಿಶ್ರಷಡ್ವಣಂಗಳೆ ಪ್ರತಿ ಮಿಶ್ರಸಂಖ್ಯಾಭೇದದಿಂ, ಮೇಳವಿಸಲು ಇನ್ನೂರಹದಿನಾರು ತತ್ವಕರಣ ಮಂತ್ರ ಪ್ರಣವ ಲಿಂಗಾಂಗಸ್ಥಲಕುಳಂಗಳಾಗಿಹವು.

ಇಂತಿವೆಲ್ಲ ಸ್ಥಳಕುಳಂಗಳಿಗೆ, ಲಿಂಗ ಹಸ್ತ ಶಕ್ತಿ ಪ್ರಸಾದ ಈ ನಾಲ್ಕುಲಿಂಗಸಕೀಲಂಗಳು, ಅಂಗ ಮುಖ ಭಕ್ತಿ ಪದಾರ್ಥ ಈ ನಾಲ್ಕು ಅಂಗ ಸಕೀಲಂಗಳು, ಇಂತೀ ಪರಿಯಲ್ಲಿ ಎಲ್ಲಾ ಸಕೀಲಂಗಳ ಸಂಬಂಧವನರಿವುದು,

ಇನ್ನು ಮೇಲಣ ದ್ವಾದಶಾಕೃತಿಗಳ ಮಧ್ಯಸ್ಥವಾದ ನೂರೆಂಟು ಮನೆಗಳ ನ್ಯಾಸಾಕ್ಷರಂಗಳೆ ಭಾವನಾಕಲಾಮೂರ್ತಿ ಭಾವನಾ ತತ್ವಶಿವಶಕ್ತಿ, ಪ್ರಕೃತಿ, ಪುರುಷರೆಂಬ ನೂರೆಂಟುತತ್ವ ನೂರೆಂಟುಕರಣ, ನೂರೆಂಟುರುದ್ರ, ನೂರೆಂಟುಶಕ್ತಿ, ಗುರು ಚರ ಪರವೆಂಬ ಲಿಂಗತ್ರಯ, ಮಂತ್ರ ಜ್ಞಾನ ಪ್ರಸಾದವೆಂಬ ಅಂಗತ್ರಯ,ಸರ್ವನಿರಾಲಂಬಸ್ಥಲ ವೊಂದು,ಅಂಗಸ್ಥಲ ೪೪ ಲಿಂಗಸ್ಥಲ ೫೭, ಇಂತೀನೂರೆಂಟು ಸ್ಥಳಕುಳ ಸ್ವರೂಪವಾಗಿಹವು. ಇನ್ನು ಚಾಕಮಧ್ಯಸ್ಥವಾದ ಅಷ್ಟಭವನನ್ಯಾಸಾಕ್ಷರಂಗಳೆ, ಅಷ್ಟಮೂರ್ತಿ ಅಷ್ಟತನು, ಅಷ್ಟಮಂತ್ರ, ಅಷ್ಟಾಂಗ, ಲಿಂಗಸಕೀಲ ಸಂಪತ್ತಿನಿಂ, ಮತ್ತಂ,ಮೂರುತೆರನಾದ ಅಷ್ಟಾವರಣಸ್ವರೂಪವಾಗಿಹವು. ಇಂತೀ ಸರ್ವಸಿದ್ಧಿಕಾರಣಮಾದ ಜ್ಞಾನಚಕ್ರೋದ್ಧರಣೆಯ ಸಂಬಂಧ ಸಮಾಪ್ತ ಮಂಗಳಮಹಾ.

---

| | | | | | | | |
|---|---|---|---|---|---|---|---|
| ನ ಗುರು. | | | ಶಿ. ನಿತ್ಯತ್ವವೆ ಲಿಂಗ | ವ. ಚಿತ್ಪ್ರಕಾಶವೆ ಜಂಗಮ. | | | ಮ ಲಿಂಗ. |
| | ನ. ಅಖಂಡತ್ವವೆ ಭಕ್ತ | ಮ. ಪರಿಪೂರ್ಣತ್ವವೆ ಗುರು. | ವ. ಚಿತ್ಪ್ರಕಾಶವೆ ಜಂಗಮ. | ಯ. ಪರಮಾನಂದವೆ ಪ್ರಸಾದ | ಯ. ಪರಮಾನಂದವೆ ಪ್ರಸಾದ. | ಓಂ. ಚಿದ್ರಸವೆ ಪಾದೋದಕ | |
| | ಮ. ಪರಿಪೂರ್ಣತ್ವವೆ. ಗುರು. | ಶಿ. ನಿತ್ಯತ್ವವೆ ಲಿಂಗ. | ವ. ಚಿತ್ಪ್ರಕಾಶವೆ ಜಂಗಮ. | ಯ. ಪರಮಾನಂದವೆ ಪ್ರಸಾದ. | ಓಂ. ಚಿದ್ರಸವೆ ಪಾದೋದಕ. | ನ. ಖಂಡತ್ವವೆ ಭಕ್ತ. | |
| ಓಂ.ಓಂ. ಕ್ಷೇತ್ರ. | ಶಿ. ನಿತ್ಯತ್ವವೆ ಲಿಂಗ. | ಮ. ಪರಿಪೂರ್ಣತ್ವವೆ ಗುರು. | ನ ಮ ಶಿ ವಾ ಯ [illegible] / ಬ ಸ ವ / ಉ / ಅ ಹ ಓ / ಮ / ಅ ಉ ಮ | ಹ್ರಂ ಹ್ರಿಂ. ಹ್ರುಂ. ಹ್ರೈಂ. ಹ್ರೌಂ. ಹ್ರಃ. | ಓಂ. ಚಿದ್ರಸವೆ ಪಾದೋದಕ, | ನ. ಅಖಂಡತ್ವವೆ ಭಕ್ತ. | ಶಿ ಜಂಗಮ. |
| ಅ ರಂಧ್ರ. | ವ. ಚಿತ್ಪ್ರಕಾಶವೆ ಜಂಗಮ. | ಮ. ಪರಿಪೂರ್ಣತ್ವವೆ ಗುರು | | | ಓಂ. ಚಿದ್ರಸವೆ ಪಾದೋದಕ. | ನ. ಅಖಂಡತ್ವವೆ ಭಕ್ತ. | ವ ಪ್ರಸಾದ. |
| | ಯ. ಪರಮಾನಂದವೆ ಪ್ರಸಾದ | ಮ. ಪರಿಪೂರ್ಣತ್ವವೆ ಗುರು | ಶಿ. ನಿತ್ಯತ್ವವೆ ಲಿಂಗ. | ಯ. ಪರಮಾನಂದವೆ ಪ್ರಸಾದ. | ಓಂ. ಚಿದ್ರಸವೆ ಪಾದೋದಕ | ನ. ಅಖಂಡತ್ವವೆ ಭಕ್ತ. | |
| | ಓಂ. ಚಿದ್ರಸವೆ ಪಾದೋದಕ. | ಮ. ಪರಿಪೂರ್ಣತ್ವವೆ ಗುರು | ಶಿ. ನಿತ್ಯತ್ವವೆ ಲಿಂಗ. | ವ. ಚಿತ್ಪ್ರಕಾಶವೆ ಜಂಗಮ. | ಯ. ಪರಮಾನಂದವೆ ಪ್ರಸಾದ. | ನ. ಅಖಂಡತ್ವವೆ ಭಕ್ತ. | |
| ಅ ವಿಭೂತಿ. | | | ಶಿ. ನಿತ್ಯತ್ವವೆ ಲಿಂಗ. | ವ. ಚಿತ್ಪ್ರಕಾಶವೆ ಜಂಗಮ. | | | ಯ. ಪಾದೋದಕ. |

## ಗೋಮುಖೋದ್ಧರಣೆ. ೫.

| | | | | |
|---|---|---|---|---|
| | | ಹಂ | ಸಂ | |
| | ಕ್ಷಂ | ಕ್ಷಂ | ಅಂ | ಆಂ |
| ಕ್ಷಂ | ಕ್ಷಂ | ಓಂ | ಅಃ | ಅಃ |
| ಳಂ | ಳಂ | | ಅಂ | ಅಂ |
| ಹಂ | ಹಂ | | ಆಂ | ಆಂ |
| ಸಂ | ಸಂ | | ಇಂ | ಇಂ |
| ಷಂ | ಷಂ | ಯ | ಈಂ | ಈಂ |
| ಶಂ | ಶಂ | | ಉಂ | ಉಂ |
| ವಂ | ವಂ | | ಊಂ | ಊಂ |
| ಲಂ | ಲಂ | | ಋ | ಋ |
| ರಂ | ರಂ | ವಾ | ೠ | ೠ |
| ಯಂ | ಯಂ | | ಌ | ಌ |
| ಮಂ | ಮಂ | | ೡ | ೡ |
| ಭಂ | ಭಂ | | ಏಂ | ಏಂ |
| ಬಂ | ಬಂ | ಶಿ | ಐ | ಐ |
| ಫಂ | ಫಂ | | ಓ | ಓ |
| ಪಂ | ಪಂ | | ಔ | ಔ |
| ನಂ | ನಂ | | ಅಂ | ಅಂ |
| ಧಂ | ಧಂ | ಮ | ಆಂ | ಆಂ |
| ದಂ | ದಂ | | ಕಂ | ಕಂ |
| ಥಂ | ಥಂ | | ಖಂ | ಖಂ |
| ತಂ | ತಂ | | ಗಂ | ಗಂ |
| ಣಂ | ಣಂ | ನ | ಘಂ | ಘಂ |
| ಢಂ | ಢಂ | | ಙಂ | ಙಂ |
| ಡಂ | ಡಂ | | ಚಂ | ಚಂ |
| ಠಂ | ಠಂ | | ಛಂ | ಛಂ |

ಟಂ ಞಂ ಝಂ ಜಂ

ಟಂ ಞಂ ಝಂ ಜಂ

| ಪರಬ್ರಹ್ಮ. | ವಿಜ್ಞಾನಬ್ರಹ್ಮ. | ಆನಂದಬ್ರಹ್ಮ. | ಕಲಾಬ್ರಹ್ಮ. | ಪಿಂಡಬ್ರಹ್ಮ. | ಮೂರ್ತಿ ಬ್ರಹ್ಮ. | | |
|---|---|---|---|---|---|---|---|
| ಶಿವ. | ಸದಾಶಿವ. | ಈಶ್ವರ. | ರುದ್ರ. | ವಿಷ್ಣು. | ಬ್ರಹ್ಮ. | ಶಿವಾಂಗ | ಚಿಚ್ಛಕ್ತಿ |
| ಕ್ಷೇತ್ರಜ್ಞ. | ಆಕಾಶ. | ವಾಯು | ತೇಜ. | ಅಪ್ಪು. | ಪೃಥ್ವಿ. | ಭೂತಾಂಗ. | ಪರಶಕ್ತಿ. |
| ಕರ್ತಾರ. | ಶಬ್ದ. | ಸ್ಪರ್ಶ. | ರೂಪು. | ರಸ. | ಗಂಧ. | ಯೋಗಾಂಗ. | ಆದಿಶಕ್ತಿ. |
| ಭಾವ. | ಜ್ಞಾನ. | ಮನ. | ಬುದ್ಧಿ. | ಚಿತ್ತ. | ಅಹಂಕಾರ. | ಕಾಮಾಂಗ. | ಇಚ್ಛಾಶಕ್ತಿ. |
| ಚೈತನ್ಯ. | ಶ್ರೋತ್ರ. | ತ್ವಕ್ಕು. | ನೇತ್ರ. | ಜಿಹ್ವೆ. | ಘ್ರಾಣ. | ವಿದ್ಯಾಂಗ. | ಜ್ಞಾನಶಕ್ತಿ. |
| ಅಂತರ್ಯಾಮಿ. | ವಾಕ್ಕು. | ಪಾಣಿ. | ಪಾದ. | ಗುಹ್ಯ. | ಪಾಯು. | ಕರ್ಮಾಂಗ. | ಕ್ರಿಯಾಶಕ್ತಿ. |

| | | | | | | | | |
|---|---|---|---|---|---|---|---|---|
| ನಿಷ್ಕಲ ಶಿವ | ಚಿಛ್ಛಕ್ತಿ. | ಶಾಂತಾತೀತೋತ್ತರೆಯೆಂಬಕಲೆ. | ಮಹಾ ಲಿಂಗ. | ನಿರ್ಮುಕ್ತ ಸದಾಖ್ಯ | ಪಶುಪತಿಯೆಂಬ ಕಲಾಮೂರ್ತಿ. | ಶಿವನೆಂಬಐಕ್ಯ. | ಉಪಮಾ ಶೀತ | ಆತ್ಮ. |
| ನಿಷ್ಕಲ ಶಿವ. | ಪರಶಕ್ತಿ. | ಶಾಂತಾತೀತೆಯೆಂಬ ಕಲೆ. | ಪ್ರಸಾದ ಲಿಂಗ | ಶಿವಸದಾಖ್ಯ. | ಮಹಾದೇವ ನೆಂಬಕಲಾಮೂರ್ತಿ. | ಕ್ಷೇತ್ರಜ್ಞನೆಂಬ ಶರಣ. | ಸದಾಶಿವ. | ಆಕಾಶ. |
| ನಿಷ್ಕಲ ಶಿವ. | ಆದಿಶಕ್ತಿ. | ಶಾಂತಿಯೆಂಬಕಲೆ. | ಜಂಗಮ ಲಿಂಗ | ಅಮೂರ್ತಿ ಸದಾಖ್ಯ. | ಭೀಮೇಶನೆಂಬ ಕಲಾವರ್ತಿ. | ಕರ್ತಾರನೆಂಬ ಪ್ರಾಣಲಿಂಗ. | ಈಶ್ವರ. | ವಾಯುವು |
| ನಿಷ್ಕಲ ಶಿವ. | ಇಚ್ಛಾ ಶಕ್ತಿ. | ವಿದ್ಯೆಯೆಂಬಕಲೆ. | ಶಿವ ಲಿಂಗ. | ಮೂರ್ತಿ ಸದಾಖ್ಯ. | ಮಹಾರುದ್ರ ನೆಂಬಕಲಾಮೂರ್ತಿ. | ಭಾವನೆಂಬ ಪ್ರಸಾದಿ. | ರುದ್ರ. | ಅಗ್ನಿ. |
| ನಿಷ್ಕಲ ಶಿವ. | ಜ್ಞಾನ ಶಕ್ತಿ. | ತ್ರಿಷ್ಠೆಯೆಂಬ ಕಲೆ. | ಗುರು ಲಿಂಗ. | ಕರ್ತೃ ಸದಾಖ್ಯ. | ಶರ್ವನೆಂಬ ಕಲಾಮೂರ್ತಿ. | ಚೈತನ್ಯನೆಂಬ ಮಹೇಶ. | ವಿಷ್ಣು. | ಅಪ್ಪು. |
| ನಿಷ್ಕಲ ಶಿವ. | ಕ್ರಿಯಾ ಶಕ್ತಿ. | ನಿವೃತ್ತಿಯೆಂಬ ಕಲೆ. | ಆಚಾರ ಲಿಂಗ. | ಕರ್ಮಸದಾಖ್ಯ. | ಭವನೆಂಬಕಲಾ ಮೂರ್ತಿ. | ಅಂತರ್ಯಾಮಿಯೆಂಬಭಕ್ತ. | ಬ್ರಹ್ಮ | ಪೃಥ್ವಿ. |

ಕ. 6

| ಪಂಚಾಕ್ಷರಿ. | ಓಂ ಹ್ರಃ ಬಸವ ಪವಿತ್ರ ಪಾವನ ಪಾವನ ಬಸವ. | ಗುರು. | ಓಂ ಹ್ರಂ ಶುದ್ಧ ಗುರು ಬಸವ | ಲಿಂಗ. |
|---|---|---|---|---|

ಓಂ ಹ್ರಾಂ ಮಹಾಪ್ರಸಿದ್ಧ ಗುರುಬಸವ.

ರುದ್ರಾಕ್ಷಿ.

ಓಂ ಹ್ರೂಂ ಲಿ ಅ ಮ ಚರಿಷ್ಣು ಚರಾಚರ ಬಸವ.

ಓಂ ಹ್ರಿಂ ಪವಿತ್ರಾಯ ಗುರುಬಸವಗುರು ಬಸವ.

ಜಂಗಮ.

ಓಂ ಹ್ರೈಂ ಸಿದ್ಧ ಗುರು ಬಸವ.

| | | | |
|---|---|---|---|
| ಕೃತಯುಗ. | ತ್ರೇತಾಯುಗ. | ದ್ವಾಪರಯುಗೆ. | ಕಲಿಯುಗ. |
| ಋಗ್ವೇದ | ಯಜುರ್ವೇದ. | ಸಾಮವೇದ. | ಅಥರ್ವಣವೇದ. |
| ಕ್ರಿಯಾಪಾದ. | ಚರ್ಯಾಪಾದ. | ಜ್ಞಾನಪಾದ. | ಯೋಗಪಾದ. |
| ಸಾಲೋಕ್ಯ. | ಸಾಮೀಪ್ಯ. | ಸಾರೂಪ್ಯ. | ಸಾಯುಜ್ಯ. |
| ಧರ್ಮ. | ಅರ್ಥ. | ಕಾಮ. | ಮೋಕ್ಷ. |

| ವಿಭೂತಿ. | ಓಂ ಹ್ರೌಂ ಪ್ರಸಿದ್ಧ ಗುರುಬಸವ. | ಪಾದೋದಕ. | ಓಂ ಹ್ರೇಂ ನಮಶಿವಾಯ ಪರಾಪರಬಸವ. | ಪ್ರಸಾದ. |
|---|---|---|---|---|

| | | | | | |
|---|---|---|---|---|---|
| ಆತ್ಮ. | ಭಾವ. | ಚಿತ್ತ. | ಹೃದಯ. | ತೃಪ್ತಿ. | ಮನನ. |
| ಆಕಾಶ. | ಜ್ಞಾತೃ. | ಸಮಾನ. | ಶ್ರೋತ್ರ. | ಶಬ್ದ. | ವಾಕ್ಯ. |
| ವಾಯು. | ಮನ | ವ್ಯಾನ. | ತ್ವಕ್ಕು. | ಸ್ಪರ್ಶ. | ಪಾಣಿ. |
| ಅಗ್ನಿ. | ಬುದ್ಧಿ. | ಉದಾನ. | ಚಕ್ಷು. | ರೂಪ. | ಪಾದ. |
| ಅಪ್ಪು. | ಚಿತ್ತ. | ಅಪಾನ. | ಜಿಹ್ವೆ. | ರಸ. | ಗುಹ್ಯ. |
| ಪೃಥ್ವಿ | ಅಹಂಕಾರ. | ಪ್ರಾಣ. | ಘ್ರಾಣ. | ಗಂಧ. | ಪಾಯು. |

| | | | | | |
|---|---|---|---|---|---|
| ಓಂ ಆತ್ಮ. | ಯ ಓಂ ಭಾವ. | ವ ಓಂ ಚಿತ್ತ. | ಶಿ ಓಂ ಹೃದಯ. | ಮ ಓಂ ತೃಪ್ತಿ. | ನ ಓಂ ಮನನೆ. |
| ಯ ಆಕಾಶ. | ಯ ಯ ಜ್ಞಾನ | ವ ಯ ಸಮಾನ. | ಶಿ ಯ ಶ್ರೋತ್ರ. | ಮ ಯ ಶಬ್ದ. | ನ ಯ ವಾಕ್ಕು. |
| ವ ವಾಯು. | ಯ ವ ಮನ. | ವ ವ ವ್ಯಾನ. | ಶಿ ವ ತ್ವಕ್ಕು. | ಮ ವ ಸ್ಪರಿಶ | ನ ವ ಪಾಣಿ. |
| ಶಿ ಅಗ್ನಿ. | ಯ ಶಿ ಬುದ್ಧಿ. | ವ ಶಿ ಉದಾನ. | ಶಿ ಶಿ ಚಕ್ಷು. | ಮ ಶಿ ರೂಪು. | ನ ಶಿ ಪಾದ. |
| ಮ ಅಪ್ಪು. | ಯ ಮ ಚಿತ್ತ. | ವ ಮ ಅಪಾನ. | ಶಿ ಮ ಜಿಂಹ್ವೆ. | ಮ ಮ ರಸ. | ನ ಮ ಗುಹ್ಯ. |
| ನ ಪೃಥ್ವಿ. | ಯ ನ ಅಹಂಕಾರ. | ವ ನ ಪ್ರಾಣ. | ಶಿ ನ ಘ್ರಾಣ. | ಮ ನ ಗಂಧ. | ನ ನ ಪಾಯು. |

| | | | | | |
|---|---|---|---|---|---|
| ಆಚಾರಲಿಂಗಮಹಾ ಲಿಂಗಮನ. | ಆಚಾರಲಿಂಗಪ್ರಸಾದ ಲಿಂಗವಾಕ್ಕು. | ಆಚಾರಲಿಂಗಜಂಗಮ ಲಿಂಗಪಾಣಿ. | ಆಚಾರಲಿಂಗ ಶಿವ ಲಿಂಗ ಪಾದ. | ಆಚಾರ ಲಿಂಗ ಗುರುಲಿಂಗ ಗುಹ್ಯ. | ಆಚಾರ ಲಿಂಗ ಪಾಯು. |
| ಗುರುಲಿಂಗ ಮಹಾ ಲಿಂಗ ಶ್ರೋತ್ರ. | ಗುರುಲಿಂಗಪ್ರಸಾ ದಲಿಂಗ ಜಿಹ್ವೆ. | ಗುರುಲಿಂಗಜಂಗ ಮಲಿಂಗ ತ್ವಕ್. | ಗುರುಲಿಂಗಶಿವಲಿಂ ಗ ಚಕ್ಷು. | ಗುರು ಲಿಂಗ ರಸ. | ಗುರು ಲಿಂಗ ಆಚಾರ ಲಿಂಗ ಗಂಧ. |
| ಶಿವಲಿಂಗಮಹಾ ಲಿಂಗ ಹೃದಯ. | ಶಿವಲಿಂಗಪ್ರಸಾ ದಲಿಂಗಶ್ರೋತ್ರ. | ಶಿವಲಿಂಗ ಜಂಗಮ ಲಿಂಗ ತ್ವಕ್ಕು. | ಶಿವಲಿಂಗ ನೇತ್ರ. | ಶಿವ ಲಿಂಗ ಗುರು ಲಿಂಗ ಜಿಹ್ವೆ. | ಶಿವ ಲಿಂಗ ಆಚಾರ ಲಿಂಗ ಘ್ರಾಣ. |
| ಜಂಗಮಲಿಂಗ ಮಹಾಲಿಂಗಚಿತ್ತ. | ಜಂಗಮಲಿಂಗಪ್ರ ಸಾದಲಿಂಗಸಮಾನ. | ಜಂಗಮಲಿಂಗ ವ್ಯಾನ. | ಜಂಗಮ ಲಿಂಗ ಶಿವಲಿಂಗ ಉದಾನ. | ಜಂಗಮ ಲಿಂಗ ಗುರು ಲಿಂಗ ಅಪಾನ. | ಜಂಗಮ ಲಿಂಗ ಆಚಾರ ಲಿಂಗ ಪ್ರಾಣ. |
| ಪ್ರಸಾದಲಿಂಗ ಮಹಾಲಿಂಗಭಾವ. | ಪ್ರಸಾದಲಿಂಗ ಮ ಹಾಲಿಂಗ ಸು ಜ್ಞಾನ. | ಪ್ರಸಾದಲಿಂಗ ಜಂಗಮಲಿಂಗ ಸುಮನ. | ಪ್ರಸಾದಲಿಂಗಶಿವ ಲಿಂಗಸುಬುದ್ಧಿ. | ಪ್ರಸಾದಲಿಂಗ ಗುರು ಲಿಂಗ ಸುಚಿತ್ತ. | ಪ್ರಸಾದ ಲಿಂಗ ಆಚಾರಲಿಂಗ ನಿರಹಂಕಾರ. |
| ಮಹಾಲಿಂಗ ಐಕ್ಯ. | ಮಹಾಲಿಂಗ ಪ್ರಸಾದಲಿಂಗ ಶರಣ ಆಕಾಶ. | ಮಹಾಲಿಂಗ ಜಂಗ ಮಲಿಂಗ ಪ್ರಾಣ ಲಿಂಗ ವಾಯು. | ಮಹಾಲಿಂಗ ಶಿವಲಿಂ ಗ ಪ್ರಸಾದಿ ಅಗ್ನಿ. | ಮಹಾಲಿಂಗ ಗುರುಲಿಂಗ ಮಹೇಶ್ವರ ಅಪ್ಪು. | ಮಹಾ ಲಿಂಗ ಆಚಾರ ಲಿಂಗ ಭಕ್ತ, ಪೃಥ್ವಿ. |

## ಬಸವಾಕ್ಷರೋದ್ಧರಣೆ. ೨೦.

| | | | | | |
|---|---|---|---|---|---|
| ಬ. | ಸ | ವ. | ಬ. | ಸ. | ವ. |
| ಬ. | ಸ. | ವ. | ಬ. | ಸ. | ವ. |
| ಬ. | ಸ. | ವ. | ಬ. | ಸ. | ವ. |
| ಬ. | ಸ. | ವ. | ಬ. | ಸ. | ವ. |
| ಬ. | ಸ. | ವ. | ಬ. | ಸ. | ವ. |
| ಬ. | ಸ. | ವ. | ಬ. | ಸ. | ವ |

## ಅಥಃ ಕುಂಡಲಿ ಕಲಿವೇದಪಠನೆ. ೨೨.





ಊರ್ಧ್ವಕುಂಡಲಿ ಜ್ಞಾನವೇದಪಠನೆ. ೨೩.





| ಓ | ಯ | ವಾ | ಶಿ | ಮ | ನ |
|---|---|---|---|---|---|
| ರೂಪು. | ರೂಪು. | ರೂಪು. | ರೂಪು. | ರೂಪು. | ರೂಪು. |
| ರುಚಿ. | ರುಚಿ. | ರುಚಿ. | ರುಚಿ. | ರುಚಿ. | ರುಚಿ. |
| ತೃಪ್ತಿ. | ತೃಪ್ತಿ. | ತೃಪ್ತಿ. | ತೃಪ್ತಿ. | ತೃಪ್ತಿ. | ತೃಪ್ತಿ. |
| ರೂಪು. | ರೂಪು. | ರೂಪು. | ರೂಪು. | ರೂಪು. | ರೂಪು. |
| ರುಚಿ. | ರುಚಿ. | ರುಚಿ. | ರುಚಿ. | ರುಚಿ. | ರುಚಿ. |
| ತೃಪ್ತಿ. | ತೃಪ್ತಿ. | ತೃಪ್ತಿ. | ತೃಪ್ತಿ. | ತೃಪ್ತಿ. | ತೃಪ್ತಿ. |
| ರೂಪು. | ರೂಪು. | ರೂಪು. | ರೂಪು. | ರೂಪು. | ರೂಪು. |
| ರುಚಿ. | ರುಚಿ. | ರುಚಿ. | ರುಚಿ. | ರುಚಿ. | ರುಚಿ. |
| ತೃಪ್ತಿ. | ತೃಪ್ತಿ. | ತೃಪ್ತಿ. | ತೃಪ್ತಿ. | ತೃಪ್ತಿ. | ತೃಪ್ತಿ. |
| ರೂಪು. | ರೂಪು. | ರೂಪು. | ರೂಪು. | ರೂಪು. | ರೂಪು. |
| ಚಿರು. | ರುಚಿ. | ರುಚಿ. | ರುಚಿ. | ರುಚಿ. | ರುಚಿ. |
| ತೃಪ್ತಿ. | ತೃಪ್ತಿ. | ತೃಪ್ತಿ. | ತೃಪ್ತಿ. | ತೃಪ್ತಿ. | ತೃಪ್ತಿ. |
| ರೂಪು. | ರೂಪು. | ರೂಪು. | ರೂಪು. | ರೂಪು. | ರೂಪು. |
| ರುಚಿ. | ರುಚಿ. | ರುಚಿ | ರುಚಿ. | ರುಚಿ. | ರುಚಿ. |
| ತೃಪ್ತಿ. | ತೃಪ್ತಿ . | ತೃಪ್ತಿ. | ತೃಪ್ತಿ. | ತೃಪ್ತಿ. | ತೃಪ್ತಿ |
| ರೂಪು. | ರೂಪು. | ರೂಪು. | ರೂಪು. | ರೂಪು. | ರೂಪು. |
| ರುಚಿ. | ರುಚಿ | ರುಚಿ. | ರುಚಿ. | ರುಚಿ. | ರುಚಿ. |
| ತೃಪ್ತಿ. | ತೃಪ್ತಿ. | ತೃಪ್ತಿ. | ತೃಪ್ತಿ. | ತೃಪ್ತಿ. | ತೃಪ್ತಿ. |

| | | | | | | | | | | |
|---|---|---|---|---|---|---|---|---|---|---|
| ಐಕ್ಯ. | ಮಹಾ ಲಿಂಗ. | ಹೃದಯ. | ಭಾವ. | ಚಿಚ್ಛಕ್ತಿ. | ಶಾಂತಾ ತೀತೋತ್ತರೆ. | ಸಮರಸ. | ಮಹಾಸ ದಾಖ್ಯ. | ತೃಪ್ತಿ. | ಓಂ ಹ್ರಃ. | ಪ್ರಸಾ ದ. |
| ಶರಣ. | ಪ್ರಸಾದ ಲಿಂಗ. | ಶ್ರೋತ್ರ | ಜ್ಞಾನ. | ಪರಶಕ್ತಿ. | ಶಾಂತಾ ತೀತೆ. | ಆನಂದ. | ಶಿವ ಸದಾಖ್ಯ. | ಶಬ್ದ. | ಓಂ ಹ್ರಾಂ | ಪ್ರಸಾ ದ. |
| ಪ್ರಸಾದ ಲಿಂಗ. | ಜಂಗಮ ಲಿಂಗ. | ತ್ವಕ್ಕು. | ಸುಮನ. | ಆದಿಶಕ್ತಿ. | ಶಾಂತಿ. | ಅನುಭಾವ | ಅ ಮೂರ್ತಿ ಸದಾಖ್ಯ. | ಸ್ಪರ್ಶ. | ಓಂ ಹ್ರೈಂ | ಪ್ರಸಾ ದ. |
| ಪ್ರಸಾದಿ | ಶಿವಲಿಂಗ. | ಚಕ್ಷು. | ನಿರಹಂ ಕಾರ. | ಇಚ್ಛಾ ಶಕ್ತಿ | ವಿದ್ಯೆ. | ಸಾವಧಾನ. | ಮೂರ್ತಿ ಸದಾಖ್ಯ | ರೂಪು. | ಓಂ ಹ್ರುಂ. | ಪ್ರಸಾ ದ. |
| ಮಹೇಶ. | ಗುರು ಲಿಂಗ. | ಜಿಹ್ವೆ. | ಬುದ್ಧಿ. | ಜ್ಞಾನ ಶಕ್ತಿ | ಪ್ರತಿಷ್ಠೆ. | ನಿಷ್ಠೆ. | ಕರ್ತೃ ಸದಾಖ್ಯ. | ರಸ- | ಓಂ ಹ್ರಿಂ. | ಪ್ರಸಾ ದ. |
| ಭಕ್ತ. | ಆಚಾರ ಲಿಂಗ. | ಘ್ರಾಣ. | ಚಿತ್ತ. | ಕ್ರಿಯಾ ಶಕ್ತಿ. | ನಿವೃತ್ತಿ. | ಶ್ರದ್ಧೆ. | ಕರ್ಮ ಸದಾಖ್ಯ. | ಗಂಧ. | ಓಂ ಹ್ರಂ. | ಪ್ರಸಾ ದ. |

| | | | | | | | |
|---|---|---|---|---|---|---|---|
| ಮಹಾಲಿಂಗ. | ಐಕ್ಯ. | ಚಿಚ್ಛಕ್ತಿ. | ಸಮತಸಭಕ್ತಿ. | ಸದ್ಭಾವಹಸ್ತ. | ಹೃದಯ. | ತೃಪ್ತಿ. | ಪ್ರಸಾದ. |
| ಪ್ರಸಾದಲಿಂಗ. | ಶರಣ. | ಪರಶಕ್ತಿ. | ಆನಂದಭಕ್ತಿ. | ಸುಜ್ಞಾನಹಸ್ತ | ಶ್ರೋತ್ರ. | ಶಬ್ದ. | ಪ್ರಸಾದ. |
| ಜಂಗಮಲಿಂಗ. | ಪ್ರಾಣಲಿಂಗ. | ಆದಿಶಕ್ತಿ. | ಅನುಭಾವ ಭಕ್ತಿ. | ಸುಮನಹಸ್ತ- | ತ್ವಕ್ಕು | ಸ್ಪರ್ಶ. | ಪ್ರಸಾದ. |
| ಶಿವಲಿಂಗ. | ಪ್ರಸಾದ. | ಇಚ್ಛಾಶಕ್ತಿ. | ಸಾವಧಾನಭಕ್ತಿ | ನಿರಹಂಕಾರ ಹಸ್ತ. | ಚಕ್ಷು. | ರೂಪು. | ಪ್ರಸಾದ. |
| ಗುರುಲಿಂಗ. | ಮಹೇಶ. | ಜ್ಞಾನಶಕ್ತಿ. | ನೈಷ್ಠಿಕಾ ಭಕ್ತಿ. | ಸುಬುದ್ಧಿಹಸ್ತ. | ಜಿಹ್ವೆ. | ರಸ. | ಪ್ರಸಾದ. |
| ಆಚಾರಲಿಂಗ. | ಭಕ್ತ. | ಕ್ರಿಯಾಶಕ್ತಿ. | ಶ್ರದ್ಧಾಭಕ್ತಿ. | ಸುಚಿತ್ತಹಸ್ತ. | ಘ್ರಾಣ. | ಗಂಧ. | ಪ್ರಸಾದ. |

| | | | | | |
|---|---|---|---|---|---|
| ಇವೆಲ್ಲ ಅಲ್ಲಿಯ ಗಂಧ ೬. | ಇವೆಲ್ಲ ಅಲ್ಲಿಯ ರುಚಿ ೬. | ಇವೆಲ್ಲ ಅಲ್ಲಿಯ ರೂಪು ೬. | ಇವೆಲ್ಲ ಅಲ್ಲಿಯ ಸ್ಪರ್ಶನ ೬. | ಇವೆಲ್ಲ ಅಲ್ಲಿಯ ಶಬ್ದ ೬. | ಇವೆಲ್ಲ ಅಲ್ಲಿಯ ತೃಪ್ತಿ ೬. |
| ಕಾಯಿಹಣ್ಣು ಫಲದ ಗಂಧ ೬. | ಕಹಿಯಾದ ರುಚಿ ೬. | ಕಪೋತವರ್ಣದ ರೂಪು ೬ | ಮಿಶ್ರವಾದ ಸ್ಪರ್ಶನ ೬. | ವಚನದ ಶಬ್ದ ೬. | ಶಬ್ದದ ತೃಪ್ತಿ ೬. |
| ಮೊಗ್ಗೆ ಪುಷ್ಪದ ಗಂಧ ೬. | ಅಮ್ಲವಾದ ರುಚಿ ೬. | ಮಂಜಿಷ್ಠಾವರ್ಣದರೂಪು೬. | ನೈಯಿತ್ಯವಾದ ಸ್ಪರ್ಶನ ೬. | ಕೊಳಲು ವಾಸುಕಿ ನಾಗಸರ ಶಂಖದ ಶಬ್ದ ೬. | ಸ್ಪರ್ಶನದ ತೃಪ್ತಿ ೬. |
| ಚಿಗುರು ಪತ್ರೆಯ ಗಂಧ ೬. | ಕಾರವಾದ ರುಚಿ ೬. | ಹರಿತವರ್ಣದ ರೂಪು ೬. | ಉಷ್ಣವಾದ ಸ್ಪರುಶನ ೬. | ತಡುಹಿನ ಶಬ್ದ ೬. | ರೂಪಿನ ತೃಪ್ತಿ ೬ |
| ಮರಸಿಗುಡ್ಡ ಹೆಗಿನದ ಗಂಧ ೬. | ಒಗರಾದ ರುಚಿ ೬. | ಶ್ವೇತವರ್ಣದ ರೂಪು ೬. | ಮೃದುವಾದಸ್ಪರುಶನ ೬. | ತಂತಿಯೆಳೆಪಿಡಿದು ಹುಟ್ಟಿದ ಶಬ್ದ ೬. | ರಸದ ತೃಪ್ತಿ ೬. |
| ಬೇರುಗೆಣಸಿನ ಗಂಧ ೬. | ಮಧುರವಾದ ರುಚಿ ೬. | ಪೀತವರ್ಣದ ರೂಪು ೬. | ಕಠಿನವಾದ ಸ್ಪರುಶನ ೬. | ತಾಳಕಂಸಾಳೆದ ಶಬ್ದ ೬. | [illegible] ತೃಪ್ತಿ ೬. |